# ಪ್ರಾಥಮಿಕ ಶಿಕ್ಷಣದಲ್ಲಿ ಶಾಲೆ ಬಿಡುವಿಕೆ; ಮುಸ್ಲಿಂ ಸಮುದಾಯದಲ್ಲಿ ಲಿಂಗಾಧಾರಿತ ನೆಲೆಯನ್ನು ಅನುಲಕ್ಷಿಸಿ

ಕನ್ನಡ ವಿಶ್ವವಿದ್ಯಾಲಯ, ಹಂಪಿ ಮಹಿಳಾ ಅಧ್ಯಯನ ವಿಭಾಗಕ್ಕೆ ಎಂ.ಫಿಲ್
ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ

ಸಂಶೋಧಕಿ
ಎಚ್. ತಬಸುಂ

ಮಾರ್ಗ ದರ್ಶಕರು
ಡಾ. ಶೈಲಜ ಹಿರೇಮಠ



ಭಾಷಾ ನಿಕಾಯ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - 583 276
2007

# ಪ್ರಾಥಮಿಕ ಶಿಕ್ಷಣದಲ್ಲಿ ಶಾಲೆ ಬಿಡುವಿಕೆ; ಮುಸ್ಲಿಂ ಸಮುದಾಯದಲ್ಲಿ ಲಿಂಗಾಧಾರಿತ ನೆಲೆಯನ್ನು ಅನುಲಕ್ಷಿಸಿ

ಕನ್ನಡ ವಿಶ್ವವಿದ್ಯಾಲಯ, ಹಂಪಿ ಮಹಿಳಾ ಅಧ್ಯಯನ ವಿಭಾಗಕ್ಕೆ ಎಂ.ಫಿಲ್
ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ



ಸಂಶೋಧಕಿ
**ಎಚ್. ತಬಸುಂ**

ಮಾರ್ಗ ದರ್ಶಕರು
**ಡಾ. ಶೈಲಜ ಹಿರೇಮಠ**






ಭಾಷಾ ನಿಕಾಯ
**ಮಹಿಳಾ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - 583 276
2007

# ಪ್ರಮಾಣ ಪತ್ರ

**"ಪ್ರಾಥಮಿಕ ಶಿಕ್ಷಣದಲ್ಲಿ ಶಾಲೆ ಬಿಡುವಿಕೆ; ಮುಸ್ಲಿಂ ಸಮುದಾಯದಲ್ಲಿ ಲಿಂಗಾಧಾರಿತ ನೆಲೆಯನ್ನು ಅನುಲಕ್ಷಿಸಿ"**.ಎಂಬ ಶೀರ್ಷಿಕೆಯ ನಿಬಂಧವನ್ನು **ಡಾ||ಶೈಲಜಾಹಿರೇಮಠ** ರವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಮಹಿಳಾ ಅಧ್ಯಯನ ವಿಭಾಗಕ್ಕೆ ಎಂ. ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀ ಕರಿಸುತ್ತೇನೆ.

ದಿನಾಂಕ :- 31/7/07

(ಎಚ್.ತಬಸುಂ)

ಸ್ಥಳ :- ವಿದ್ಯಾರಣ್ಯ

ಎಂ. ಫಿಲ್. ವಿಧ್ಯಾರ್ಥಿನಿ

ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವ ವಿದ್ಯಾಲಯ ಹಂಪಿ

ವಿದ್ಯಾರಣ್ಯ ; ೫೮೩ ೨೭೬

# ದೃಢೀಕರಣ ಪತ್ರ

ಎಚ್.ತಬಸುಂ ಇವರು **"ಪ್ರಾಥಮಿಕ ಶಿಕ್ಷಣದಲ್ಲಿ ಶಾಲೆ ಬಿಡುವಿಕೆ; ಮುಸ್ಲಿಂ ಸಮುದಾಯದಲ್ಲಿ ಲಿಂಗಾಧಾರಿತ ನೆಲೆಯನ್ನು ಅನುಲಕ್ಷಿಸಿ"** ಎಂಬ ಶೀರ್ಷಿಕೆಯ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ, ಹಂಪಿ ಮಹಿಳಾ ಅಧ್ಯಯನ ವಿಭಾಗಕ್ಕೆ ಎಂ. ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಧೃಡೀಕರಿಸುತ್ತೇನೆ.

ದಿನಾಂಕ: 31/7/07

ಸ್ಥಳ:- ವಿಧ್ಯಾರಣ್ಯ

**(ಡಾ. ಶೈಲಜಾ ಹಿರೇಮಠ)**

ಮಾರ್ಗದರ್ಶಕರು ಮತ್ತು ಮುಖ್ಯಸ್ಥರು

ಮಹಿಳಾ ಅಧ್ಯಯನ ವಿಭಾಗ ಕನ್ನಡ

ವಿಶ್ವವಿದ್ಯಾಲಯ,ಹಂಪಿ

ವಿದ್ಯಾರಣ್ಯ - ೫೮೩೨೭೬ .

# ಪರಿವಿಡಿ

## ಪೀಠಿಕೆ

ಯಾವುದೇ ರಾಜ್ಯ ಅಥವಾ ರಾಷ್ಟ್ರದ ಪ್ರಗತಿಗೆ ಅಲ್ಲಿಯ ಶಿಕ್ಷಣ ಕ್ರಮವೇ ಕಾರಣವಾಗಿದೆ. ಶಿಕ್ಷಣವು ಸಮಾಜದಲ್ಲಿ ಪ್ರತಿಯೊಬ್ಬ ವ್ಯಕ್ತಿಗೂ ತನ್ನ ವ್ಯಕ್ತಿತ್ವ ವನ್ನು ಉತ್ತಮ ರೀತಿಯಲ್ಲಿ ರೂಪಿಸಿಕೊಳ್ಳಲು ಮತ್ತು ಉತ್ತಮ ಪ್ರಾಜೆಯಾಗಿ ಬಾಳಲು ಅತಿ ಅವಶ್ಯಕವಾಗಿದೆ. ಮಗು ಹುಟ್ಟುವಾಗ ಸ್ವತಂತ್ರವಾಗಿ ಹುಟ್ಟುತ್ತದೆ ಆದರೆ ಸಮಾಜದಲ್ಲಿ ಹುಟ್ಟಿದಮೇಲೆ ಜಾತಿ, ಧರ್ಮ, ಲಿಂಗ, ಬಣ್ಣಗಳಿಗೆ ಸಂಬಂಧಿಸಿದಂತೆ [illegible] ಕುಟುಂಬದ ವ್ಯವಸ್ಥೆಯಲ್ಲಿ ಹುಟ್ಟಿರುತ್ತಾನೋ ಅದೇ ಕುಟುಂಬದ ಪ್ರತಿಯೊಂದು ಆಚರಣೆಗಳನ್ನು ವಿವೇಚನೆ ಇಲ್ಲದೆ ಚಾಚು ತಪ್ಪದೆ ಸರಿ ಎಷ್ಟರ ಮಟ್ಟಿಗೆ ಎನ್ನದೇ ಪಾಲಿಸುತ್ತಾನೆ ಇದಕ್ಕೆ ಅಜ್ಞಾನದ ಬಂಧನವೇ ಕಾರಣ ಎನ್ನಬಹುದು. ಇಂತಹ ಅಜ್ಞಾನದ ಬಂಧನದಿಂದ ಮುಕ್ತಗೊಳಿಸಿ ಮಾನವಿಯ ವರ್ತನೆಯನ್ನು ಕಲಿಸಿ ಉತ್ತಮ ಪ್ರಾವೃತ್ತಿಗಳನ್ನು ಬೆಳೆಸುವಂತೆ ಮಾಡುವುದೇ ಶಿಕ್ಷಣ.

ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಮಹಿಳಾ ಶಿಕ್ಷಣವು ಸಾರ್ವತ್ರಿಕವಾಗಿ ಮಾನ್ಯತೆ ನೀಡಿರಲಿಲ್ಲಿ. ಭಾರತಿಯ ಧಾರ್ಮಿಕ, ಸಾಂಸ್ಕೃತಿಕ ಮತ್ತು ಸಮಾಜಿಕ ನಂಬಿಕೆಗಳು ಮತ್ತು ಮೌಲ್ಯಗಳು ಹಾಗೂ ಆಚರಣೆಗಳು ಮಹಿಳೆಯನ್ನು ಶಿಕ್ಷಣದಿಂದ ದೂರವೇ ಇಟ್ಟಿದ್ದವು ಶಿಕ್ಷಣ ಕೇವಲ ಸನಾತನ ಧರ್ಮಕ್ಕೆ ಮಾತ್ರ ಸೀಮಿತವಾಗಿತ್ತು. ಆದರೆ ಮಹಿಳೆ ಮತ್ತು ಶೂದ್ರರಿಗೆ ಶಿಕ್ಷಣದಿಂದ ದೂರವೇ ಇಟ್ಟಿದ್ದರು.

ಭಾರತದಲ್ಲಿ ವೇದ ಮತ್ತು ಬೌದ್ಧಕಾಲದ ಶಿಕ್ಷಣದ ನಂತರ ಎರಡನೆ ತಿರುವು ಮುಸ್ಲಿಂರ ಶಿಕ್ಷಣವಾಗಿತ್ತು ಪ್ರಾಚೀನ ಕಾಲದ್ದಲ್ಲಿ ಎಲ್ಲಾ ಶಿಕ್ಷಣಗಳು ಧಾರ್ಮಿಕವೇ ಆಗಿತ್ತು ಅದರಂತೆ ಪ್ರಾಚೀನ ಕಾಲದಲ್ಲಿ ಮುಸ್ಲಿಮರು ಧಾರ್ಮಿಕ ತಳಹದಿಯ ಮೇಲೆ ಶಿಕ್ಷಣವನ್ನು ನೀಡುತ್ತಿದ್ದರು. ೧೧೯೨ರಲ್ಲಿ ಘೋರಿ ಮಹ್ಮದರು ಭಾರತದ ಶಿಕ್ಷಣದ ಸಂಸ್ಥೆಗಳಾದ ವಿದ್ಯಾಪೀಠ ದೇವಾಲಯಗಳನ್ನು ಮಾರ್ಪಾಡು ಮಾಡಿ, ಆ ಸ್ಥಳಗಳಲ್ಲಿ ಮಸೀದಿಗಳನ್ನು ಕಟ್ಟಿಸಲು ಪ್ರಾರಂಭಿಸಿದರು. 'ಮುಕ್ತಾಬ್' ಮತ್ತು 'ಮದರ್ಸಾ' ಎಂಬೆರೆಡು ಶೈಕ್ಷಣಿಕ ಸಂಸ್ಥೆಗಳನ್ನು ತೆರೆದನು. ಅವು ಕೇವಲ ಮುಸ್ಲಿಂರಿಗೆ ಮಾತ್ರ ಸಂಬಂಧ ಪಟ್ಟಿದ್ದವು. 'ಮುಕ್ತಾಬ್' ಎಂದರೆ ವಿಷಯ ಬರೆಯುವ ಸ್ಥಳ ಎಂದು ಅರ್ಥೈಸಿದ್ದಾರೆ. ಮುಕ್ತಾಬ್‌ಗಳಲ್ಲಿ ಕುರಾನನ್ನು ಭೋದಿಸಿ ಅದರಲ್ಲಿರುವ ಮೂಲಭೂತ ತತ್ವಗಳನ್ನು ತಿಳಿಸುವುದಾಗಿತ್ತು. ಇದು ಪ್ರಾಥಮಿಕ ಶಿಕ್ಷಣವನ್ನು ಕೊಡುವ ಕೇಂದ್ರ ಎಂದು 'ಮದರಸಾ' ಉನ್ನತ ಶಿಕ್ಷಣವನ್ನು ಕೊಡುವ ಕೇಂದ್ರ ಎಂದು ವಿಂಗಡಿಸಲಾಗಿತ್ತು. ಪ್ರಾಥಮಿಕ ಶಿಕ್ಷಣ

ಕೊಡುವ ಕೇಂದ್ರ ಮಸೀದಿಯೊಂದಿಗೆ ಸೇರ್ಪಡೆ ಮಾಡಲಾಗಿತ್ತು. ಆದರೆ ಇಲ್ಲಿ ಕೇವಲ ಪುರುಷರಿಗೆ ಮಾತ್ರ ಶಿಕ್ಷಣದಲ್ಲಿ ಅವಕಾಶ ಕೊಡಲಾಗಿತ್ತು, ಸ್ತ್ರೀಯರಿಗೆ ಶಿಕ್ಷಣದಲ್ಲಿ ಅವಕಾಶ ನೀಡಿರಲಿಲ್ಲ ಕೆಲವು ಸ್ತ್ರೀಯರು ಮಾತ್ರ ಮಸೀದಿಗಳಿಗೆ ಹೊಂದಿಕೊಂಡಿದ್ದ ಮುಕ್ತಾಬ್‌ಗಳಿಗೆ ಹೋಗಿ ಅಲ್ಪಸ್ವಲ್ಪ ಓದು ಬರಹ ಕಲಿಯುತ್ತಿದ್ದರು. ಬ್ರಿಟೀಷರ ಕಾಲದಲ್ಲಿ ಅವರು ತಂದಂತಹ ಶೈಕ್ಷಣಿಕ ಪ್ರಗತಿಯ ವರದಿಗಳು ಮುಸ್ಲಿಮರು ಶಿಕ್ಷಣದಲ್ಲಿ ಅತಿ ಹಿಂದುಳಿದಿದ್ದಾರೆಂದು ಹಲವಾರು ಶಿಫಾರಸ್ಸು ತಂದರು ಇದರ ಜೊತೆಗೆ ಇತರ ವರ್ಗದವರಿಗೆ ಮತ್ತು ಜಾತಿಯವರಿಗೆ ಮಹಿಳೆಯರಿಗೆ ಶಿಕ್ಷಣದಲ್ಲಿ ವಿಶೇಷ ಆಧ್ಯತೆಯನ್ನು ನೀಡಿದರು.

ಮುಸ್ಲಿಮರು ಅನೌಪಚಾರಿಕ ಶಿಕ್ಷಣಕ್ಕೆ ಹೆಚ್ಚು ಒತ್ತು ಕೊಡುತ್ತಾರೆ. ಇವರು ಪುರುಷರು ಶಿಕ್ಷಣವನ್ನು ನಿರ್ಲಕ್ಷಿಸುವರು ಇಂತಹ ಸಂಧರ್ಭದಲ್ಲಿ ಮಹಿಳೆಯರ ಶಿಕ್ಷಣ ತುಂಬ ದೂರದ ಮಾತು ಪ್ರಾಥಮಿಕ ಸಂಗಾತಿಗಳಾದ ಸಾಕ್ಷರತೆ, ಶಿಕ್ಷಣ, ಆರೋಗ್ಯಗಳಿಂದ ವಂಚಿತರಾಗಿದ್ಧಾರೆ ಅವರು ಸ್ವತಂತ್ರವಾಗಿ ತಮ್ಮ ವ್ಯಕ್ತಿತ್ವವನ್ನು ರೂಪಿಸಿ ಕೊಳ್ಳುವ ಸ್ಥಿತಿಯಲ್ಲಿಲ್ಲ ಪ್ರತಿಯೊಂದು ಹಂತದಲ್ಲೂ ಮತ್ತು ಕ್ಷೇತ್ರದಲ್ಲಿ ಮಹಿಳೆಯರಿಗೆ ತಾರತಮ್ಯದ ದೃಷ್ಟಯಿಂದ ನೋಡುವರು.

ಮುಸ್ಲಿಮರು ಶೈಕ್ಷಣಿಕ ರಂಗದಲ್ಲಿ ಇತರ ಸಮುದಾಯಗಳಿಗಿಂತ ತುಂಬಾ ಹಿಂದುಳಿದಿದ್ದಾರೆ ಅದರಲ್ಲಿ ಸ್ತ್ರೀಯರ ಶಿಕ್ಷಣಕ್ಕೆ ತೀರ ಅಪ್ರಾಮ್ಯುಖತೆ ನೀಡಿದ್ದಾರೆ ಇಸ್ಲಾಂ ಧರ್ಮವು ಅನೌಪಚಾರಿಕ ಶಿಕ್ಷಣಕ್ಕೆ ಹೆಚ್ಚು ಒತ್ತುಕೊಡುತ್ತಾ ಅವರು ಕೇವಲ ಅರಬಿ ಶಿಕ್ಷಣವನ್ನು ಪಡೆದರೆ ಸಾಕು ಎನ್ನುವ ಅಭಿಪ್ರಾಯದಲ್ಲಿದ್ದರು. ಆದ್ದರಿಂದ ಔಪಾಚಾರಿಕ ಶಿಕ್ಷಣದ ಕಡೆ ಅವರು ಹೆಚ್ಚು ಆಸಕ್ತಿ ಹೊಂದಿರಲ್ಲಿಲ್ಲ ಶಿಕ್ಷಣದ ಅಗತ್ಯ ಮಹಿಳೆಗೆ ಇಲ್ಲ ಎಂಬುದು ಮುಸ್ಲಿಂ ಸಮುದಾಯದವರು ನಂಬಿದ್ದರು.

ಕೇವಲ ಅನೌಪಚಾರಿಕ ನಿಯೋಗಗಳಾದ ಕುಟುಂಬ ಮತ್ತು ಧರ್ಮದ ನಿರ್ವಾಹಣೆ ಮಹಿಳೆ ಮಾಡಿಕೊಂಡು ಹೋಗಬೇಕೆಂದು ನಂಬಿದ್ದರು. ಕುಟುಂಬದ ಜೀವನದಲ್ಲಿ ಮುಸ್ಲಿಮ ಸಮುದಾಯದಲ್ಲಿ ಈ ರೀತಿಯಾಗಿ ಕಾರ್ಯ ವಿಂಗಡಣೆಯನ್ನು ಮಾಡಿದ್ದರು ಧನ ಸಂಪಾದನೆ ಗಂಡಿನ ಹೊಣೆಗಾರಿಕೆ, ಹೆಣ್ಣಿನದಲ್ಲ ಶಿಕ್ಷಣದ ಉದ್ದೇಶ ಉದ್ಯೋಗ ಅಥವ ಧನ ಸಂಪಾದನೆ ಮಾತ್ರ ಎಂದು ನಂಬುವರು ಹೆಣ್ಣು ಉದ್ಯೋಗ ಮಾಡಬೇಕಾಗಿಲ್ಲ ಅದಕ್ಕಾಗಿ ಅವಳಿಗೇಕೆ ಶಿಕ್ಷಣ ಎಂಬುದು ಅವರು ತರ್ಕಿಸುವರು.

ಮುಸ್ಲೀಮರ ಪ್ರಸಕ್ತ ಸ್ಥಿತಿಗಳಿಗೆ ಮೂಲ ಕಾರಣವು ಆಧುನಿಕ ಶಿಕ್ಷಣದಿಂದ ಅವರು ವಂಚಿತರಾಗಿ ರುವುದಾಗಿದೆ. ಆಧುನಿಕ ಶಿಕ್ಷಣವನ್ನು ತಮ್ಮ ಮಕ್ಕಳಿಗೆ ನೀಡುವಷ್ಟು ಸಮರ್ಥರಾಗಿಲ್ಲ ಮುಸ್ಲಿಂ ಮಾತಪಿತರು ಮಕ್ಕಳನ್ನು ಕೌಟುಂಬಿಕ ಆದಾಯದ ಗಳಿಕೆಯಲ್ಲಿ ಪಾಲುದಾರರನ್ನಾಗಿ ಬಯಸುತ್ತಾರೆ. ತಮ್ಮ ಮಕ್ಕಳ

ವಿದ್ಯಾಭ್ಯಾಸದ ಬಗ್ಗೆ ತಂದೆ ತಾಯಿಯರಿಗೆ ಆಸಕ್ತಿ ಕಡಿಮೆ, ಮಕ್ಕಳು ಶಾಲೆಯಿಂದ ಮರಳಿ ಬಂದ ಬಳಿಕ ತಂದೆ-ತಾಯಿಯ ಕೆಲಸದಲ್ಲಿ ನೆರವಾಗುತ್ತಾರೆ. ಅವರು ಶಾಲೆಗಳಿಗೆ ಆಗಾಗ ಭೇಟಿ ನೀಡಿ ಮಕ್ಕಳ ಕಲಿಕೆಯಬಗ್ಗೆ ಚರ್ಚಿಸುವದಿಲ್ಲ, ಅವರು ತಮ್ಮ ಮಕ್ಕಳನ್ನು ಶಾಲೆಗೆ ಸೇರಿಸುವ ಉದ್ದೇಶವು ಮಕ್ಕಳು ಮನೆಯಲ್ಲಿ ತಂಟೆ ಮಾಡುತ್ತಾರೆ. ಎಂಬ ಕಾರಣಕ್ಕಾಗಿ ಅಥವಾ ಸರಕಾರದ ವತಿಯಿಂದ ದೊರಕುವ ಕೆಲವು ಪ್ರಯೋಜನಗಳನ್ನು ಪಡೆಯುವುದಕ್ಕಾಗಿ ಮಾತ್ರವಾಗಿದೆ. ಇದರಿಂದಾಗಿ ಮಕ್ಕಳು ತಮಗೆ ನೀಡಲಾದ ಮನೆಗೆಲಸವನ್ನು ಮಾಡದೇ ಬೇಕಾಬಿಟ್ಟಿಯಾಗಿ ಶಾಲೆಗೆ ಬರುತ್ತಾರೆ. ಇಂತಹ ಮಕ್ಕಳಿಗೂ ಕಲಿಸುವುದು ಅಧ್ಯಾಪಕರಿಗೆ ಕಷ್ಟದ ಕೆಲಸ ಹೀಗಾಗಿ ಇಂತಾಹ ವಿದ್ಯಾರ್ಥಿಗಳು ಪ್ರಥಮ ತರಗತಿಯಲ್ಲೇ ಅನುತೀರ್ಣರಾಗಿ ತಮಗೆ ದೊರಕುತಿದ್ದ ಅಲ್ಪಸ್ವಲ್ಪ ಅಕ್ಷರ ಜ್ಞಾನವನ್ನು ಮರೆತು ಅನಕ್ಷರಸ್ಥರಾಗಿಯೇ ಉಳಿಯುತ್ತಾರೆ.

ಪ್ರಥಮ ತರಗತಿಯಿಂದ ಏಳನೇ ತರಗತಿಗೆ ಬರುವದರೊಳಗೆ ಅವರ ಸಂಖ್ಯೆಯು ಸುಮಾರು ಅರ್ದದಷ್ಟು ಕಡಿಮೆಯಾಗಿರುವದು ಕಂಡುಬಂದಿದೆ. ಈ ರೀತಿ ಮಕ್ಕಳ ಸಂಖ್ಯೆ ಅರ್ದದಷ್ಟು ಕಡಿಮೆಯಾಗಲು ಹಲವಾರು ಕಾರಣಗಳಿವೆ ಮುಖ್ಯವಾಗಿ ಮನೆಯಲ್ಲಿ ಶೈಕ್ಷಣಿಕ ವಾತವರಣವು ಇಲ್ಲದಿರುವುದರಿಂದ ಅಥವಾ ಮನೆಯಲ್ಲಿನ ವಾತವರಣವು ಮಕ್ಕಳ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹನೀಯ ವಾಗಿರುವುದಿಲ್ಲ, ಹೀಗಾಗಿ ಮಕ್ಕಳಿಗೆ ಶಿಕ್ಷಣ ಪಡೆಯಲು ಆಸಕ್ತಿ ಕಳೆದು ಕೊಳ್ಳುತ್ತಾರೆ. ಸ್ತ್ರೀಯರ ಶಿಕ್ಷಣಕ್ಕೆ ಮುಸ್ಲಿಮರು ಹೆಚ್ಚು ಪ್ರಾಮುಖ್ಯತೆ ನೀಡುವುದಿಲ್ಲ. ಮುಸ್ಲಿಮರು ಹೈಸ್ಕೂಲ್ ಮೆಟ್ಟಿಲು ಹತ್ತುವುದು ಅತ್ಯಂತ ಜಾಗರುಕತೆಯಿಂದ ತಡೆಯುತ್ತಾರೆ, ಹೆಣ್ಣು ಸಮಾಜದ ಅರ್ದಭಾಗ ಮಾತ್ರವಲ್ಲ ಆಕೆ ಮುಂದಿನ ಪೀಳಿಗೆಯ ತಾಯಿಯೂ ಹೌದು ಅಶಿಕ್ಷಿತ ತಾಯಿ ಅಶಿಕ್ಷಿತ ತಾಯಿಯಾಗಬಲ್ಲಳು ತನ್ನ ಅರ್ದಭಾಗವನ್ನು ತನ್ನ ಮಾತೆಯನ್ನು ಅಜ್ಞಾನದ ಕತ್ತಲಲ್ಲಿ ಕಟ್ಟಿಡುವ ಸಮಾಜ ಬೆಳಕನ್ನು ಪಡೆಯಲಾರದು ಎಂಬುದು ಪ್ರತಿಯೊಬ್ಬರು ಮನಗಾಣ ಬೇಕಾಗಿದೆ.

ಭಾರತದ ಸಂವಿಧಾನ ಪ್ರತಿಯೊಬ್ಬರಿಗೂ ಜಾತಿ, ಧರ್ಮ, ಬೇಧ ಮಾಡದೇ ಹದಿನಾಲ್ಕು ವರ್ಷದ ಎಲ್ಲಾ ಮಕ್ಕಳಿಗೂ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡುವ ಯೋಜನೆ ಹಾಕಿತು ಆದರೂ ಸಂಪೂರ್ಣ ಸಾಕ್ಷರತೆಯು ಇನ್ನೂ ಕನಸಾಗಿರುವ ನಮ್ಮ ದೇಶದಲ್ಲಿ ಎಲ್ಲಾ ಮಹಿಳೆಯರಿಗೆ ಸರಿಯಾಗಿ ಶಿಕ್ಷಣ ದೊರಕುತ್ತಿಲ್ಲ. ಹುಡುಗಿಯರಿಗೆ ಶಾಲೆಯಲ್ಲಿ ದೊರಕುವ ಅವಕಾಶ ಸಿಕ್ಕರು ಅದನ್ನು ಪೂರ್ಣಗೊಳಿಸುವ ಅವಕಾಶ ಇರುತ್ತದೆ. ಎಂದು ಹೇಳಲಾಗುವದಿಲ್ಲ.

ಭಾರತದ ಒಟ್ಟು ಜನಸಂಖ್ಯೆಯಲ್ಲಿ ಶೇ. ೧೨ ರಷ್ಟು ಮುಸ್ಲಿಮರು ಇದ್ದಾರೆ ಇಲ್ಲಿ ಹಿಂದುಗಳನ್ನು ಬಿಟ್ಟರೆ ಮುಸ್ಲಿಮರದೇ ಅತಿದೊಡ್ಡ ಮತಾವಲಂಬಿ ಸಮುದಾಯ ಆದರೂ ಮುಸ್ಲಿಮರು ಸಮಾಜಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದಿದ್ದಾರೆ.

೧೯೯೧ ರ ಜನಗಣತಿಯ ಪ್ರಕಾರ ಮುಸ್ಲಿಮರಲ್ಲಿ ಸಾಕ್ಷರತೆಯ ಪ್ರಮಾಣ ಶೇ.೪೫ ಆದರೆ ಅರ್ದಕ್ಕಿಂತಲು ಹೆಚ್ಚು ಮಂದಿ ಅನಕ್ಷರಸ್ಥರಿದ್ದಾರೆ. ಅದರಲ್ಲಿ ಮಹಿಳಾ ಸಾಕ್ಷರತೆ ಪ್ರಮಾಣ ಕೇವಲ ಶೇ. ೧೩, ೬ ರಿಂದ ೧೪ ವಯೋಮಾನದ ಮುಸ್ಲಿಂ ಮಕ್ಕಳ ಸಾಕ್ಷರತಾ ಪ್ರಮಾಣ ಶೇ. ೧೬.೮ ಮಾತ್ರ ಇತ್ತು ಪ್ರಾಥಮಿಕ ಹಂತದಲ್ಲಿ ನೂರರಲ್ಲಿ ಕೇವಲ ೩೫ ಮಕ್ಕಳು ಮಾತ್ರ ೫ ನೇ ತರಗತಿಗೆ ತಲುಪುತ್ತಾರೆ. ಶಾಲೆಗೆ ಹೋಗದಿರಲು ಕಾರಣ ಶೇ. ೭೫ ಮಂದಿ ಬಡತನದ ರೇಖೆಗಿಂತ ಕೆಳಗೆ ಬದುಕುತ್ತಾರೆ. ಧಾರ್ಮಿಕ ಶಿಕ್ಷಣದತ್ತ ಹೆಚ್ಚು ಒಲವನ್ನು ತೋರಿಸುತ್ತಾ ಸಾಂಪ್ರದಾಯಿಕ ಆಚರಣೆಗಳು ಬಹುಪತ್ನಿತ್ವದಿಂದ ಮುಸ್ಲಿಮರಲ್ಲಿ ಮಕ್ಕಳ ಸಂಖ್ಯೆಯು ಹೆಚ್ಚುತ್ತದೆ.

ಅದರಲ್ಲೂ ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡುವುದು ವ್ಯರ್ಥ ಏಕೆಂದರೆ ಅವರು ಕುಟುಂಬಕ್ಕೆ ಆದಾಯ ತರುವುದಿಲ್ಲ. ಎಂಬ ಆಲೋಚನೆ ಭಾರತೀಯ ಸಮಾಜದಲ್ಲಿ ಆಳವಾಗಿ ಬೇರೂರಿದೆ. ಅದು ಕೇವಲ ಮುಸ್ಲಿಂ ಸಮುದಾಯದಲ್ಲಿ ಮಾತ್ರವಲ್ಲ ಇತರ ಸಮೂದಾಯದಲ್ಲೂ ಬೇರೂರಿದೆ.

ಮುಸ್ಲಿಮರನ್ನು ಶೈಕ್ಷಣಿಕವಾಗಿ ಹಿಂದುಳಿಯುವಂತಹ ಅಂಶಗಳನ್ನು ಗಮನದಲ್ಲಿಟ್ಟು ಅವರ ಪ್ರಸಕ್ತ ಶೈಕ್ಷಣಿಕ ಮಟ್ಟವನ್ನು ಸುಧಾರಿಸಲು ನಾವು ಪರಿಣಾಮಕಾರಿ ಪರಿಹಾರೋಪಾಯಗಳನ್ನು ಕಂಡುಕೊಳ್ಳಬೇಕಾಗಿದೆ. ಅದೇರೀತಿ ಸ್ತ್ರೀ ವಿದ್ಯಾಭ್ಯಾಸ ಇಂದು ಅನಿವಾರ್ಯವಾದವಾಗಿದೆ. ಸ್ತ್ರೀ ಶಿಕ್ಷಣದ ಕುರಿತಾದ ಎರಡನೆ ದರ್ಜೆಯ ನೋಟ ಮುಸ್ಲಿಂ ಸಮುದಾಯದಿಂದ ಮಾಯವಾಗಬೇಕು. ಒಬ್ಬ ಸ್ತ್ರೀಯು ಸುಶಿಕ್ಷಿತಳಾದರೆ ಒಂದು ಸಮಾಜವೇ ಶಿಕ್ಷಿತವಾದಂತೆ ಎಂಬ ಮಾತಿನ ಮಹತ್ವವನ್ನು ಮುಸ್ಲಿಂ ಸಮುದಾಯದಿಂದ ಪ್ರತಿಯೊಬ್ಬ ಸದಸ್ಯರು ಅರಿಯಬೇಕಾದ ಅನಿವಾರ್ಯವಿದೆ.

ಮಕ್ಕಳು ಶಾಲೆ ಮಧ್ಯದಲ್ಲೇ ಬಿಡಬಾರದೆಂದು ಹಲವಾರು ಯೋಜನೆಗಳು ಬಂದಿವೆ. ಈ ಯೋಜನೆಗಳು ಇದ್ದರೂ ಸಹ ಮಕ್ಕಳು ಶಾಲೆ ಬಿಡುತ್ತಾರೆ. ಮಕ್ಕಳು ಶಾಲೆಗೆ ಬರಲು ಪ್ರೋತ್ಸಾಹಿಸಲು ಪ್ರಭಲವಾದ ಕಾನೂನುಗಳು ಬರಬೇಕು. ಮತ್ತು ಅವು ಕಾರ್ಯಗತ ವಾಗುವ ರೀತಿಯಲ್ಲಿ ಮಾಡಬೇಕು. ತಂದೆ-ತಾಯಿಯರುಸಹ ಮಕ್ಕಳಿಗೆ ಶಾಲೆಗೆ ಕಳುಹಿಸುವಲ್ಲಿ ಆಸಕ್ತಿವಹಿಸಬೇಕು. ಅಂದಾಗ ಶಾಲೆ ಬಿಡುವವರ ಸಂಖ್ಯೆ ಕಡಿಮೆ ಗೊಳಿಸಬಹುದು.

ಶಿಕ್ಷಣ ಎಂಬುದಕ್ಕೆ ಬೇರೆ ಬೇರೆ ರೀತಿಯಲ್ಲಿ ಅರ್ಥೈಸುವುದು ಕಂಡುಬರುತ್ತದೆ. 'Education' ಎಂಬ ಆಂಗ್ಲ ಶಬ್ದವು 'Educare' ಎಂಬ ಲ್ಯಾಟಿನ್ ಪದದಿಂದ ಬಂದಿದೆ ಅದರ ಅರ್ಥ 'ಏಳೆದೆತ್ತು' ಅಂದರೆ ಮಗುವಿನ ಅಥವಾ ವ್ಯಕ್ತಿಯ ಅಂತರಂಗದಲ್ಲಿ ಅಡಗಿರುವ ಸುಪ್ತ ಶಕ್ತಿಗಳನ್ನು ಬೆಳಕಿಗೆ ತಂದು ಪ್ರಕಾಶ ಮಾನವಾಗಿ ಬೆಳೆಯುವಂತೆ ಮಾಡುವದೇ ಶಿಕ್ಷಣ ಎಂದು ಅರ್ಥೈಸಲಾಗಿದೆ.

ಒಟ್ಟಾರೆ ಶಿಕ್ಷಣವೆಂದರೆ ಕೇವಲ ಜೀವನೋಪಾಯವಲ್ಲ ಇದಕ್ಕೂ ಹೆಚ್ಚಿನ ಕಾರ್ಯ ಪ್ರಯೋಜನ ಶಕ್ಷಣದಿಂದಾಗ ಬೇಕು. ವಿಚಾರ ಭಾವ ವಿಕಾಸವಾಗಿ ಅದು ಸದ್ಗುಣಗಳನ್ನು ಬೆಳೆಸಬೇಕು.

**ಶಾಲೆ ಬಿಡುವಿಕೆ (Drop-Out)**

ಶಾಲಾ ಬಿಡುವಿಕೆಯು ಮುಸ್ಲಿಂ ಸಮುದಾಯದ ಲಿಂಗಾನುಪಾತವನ್ನು ಅನುಲಕ್ಷಿಸಿ ಮಾಡಲಾಗಿದೆ ಆಯಾ ಧರ್ಮದಲ್ಲಿನ ನಂಬಿಕೆಗಳು, ಮಹಿಳಾ ಅಭಿವೃದ್ಧಿ ಮೇಲೆ, ವ್ಯಕ್ತಿತ್ವದ ಬೆಳವಣಿಗೆ ಮೇಲೆ ಎಂತಹ ಪರಿಣಾಮ ಬೀರುತ್ತದೆ ಎಂಬುದು ತಿಳಿಸಿ ಕೊಡಲು ಅಧ್ಯಯನ ನಡೆಸಲಾಗಿದೆ.

ಅಪವ್ಯಯದ ಮತ್ತೊಂದು ಮುಖವೇ ಶಾಲೆ ಬಿಡುವುದು ಶಾಲೆ ಬಿಡುವುದು ಸಹ ಪ್ರಾಥಮಿಕ ಶಿಕ್ಷಣದ ಸಮಸ್ಯೆಗಳಲ್ಲಿ ಒಂದಾಗಿದೆ. ಇದು ಭಾರತದ ಶೈಕ್ಷಣಿಕ ಪ್ರಗತಿಯಲ್ಲಿ ಒಂದು, ಆಂತರಿಕವಾಗಿ ಪರಿಣಮಿಸಿದೆ. ಈ ಸಮಸ್ಯೆಯನ್ನು ರಾಷ್ಟ್ರದ್ಯಂತ ಕಂಡುಬರುವ ಸಮಸ್ಯೆಯಾಗಿದೆ, ಈ ಸಮಸ್ಯೆಯನ್ನು ಪರಿಹರಿಸಲು ಸರಕಾರ ಹಾಗೂ ಶಿಕ್ಷಣ ತಜ್ಞರು ಪ್ರಯತ್ನವನ್ನು ಕೈಗೊಳ್ಳುತ್ತಿದ್ದಾರೆ.

''ಕಡ್ಡಾಯ ಶಿಕ್ಷಣದ ಹಂತದ ನಂತರ ಅಪವ್ಯಯವು ಸಂಬಂಧಿಸಿದರೆ ಇದಕ್ಕೆ ಶಾಲೆ ಬಿಡುವಿಕೆ ಎಂದು ಕರೆಯಲಾಗುವದು. ಇಂತಹ ವಿದ್ಯಾರ್ಥಿಗಳಿಗೆ ಶಾಲೆ ಬಿಡುವವರು ಎಂದು ಹೇಳುತ್ತಾರೆ''. ಕಡ್ಡಾಯ ಶಿಕ್ಷಣದ ಯಾವುದೇ ಹಂತದಲ್ಲಿ ಶಾಲೆಯನ್ನು ಪೂರ್ತಿಗೊಳ್ಳದೆ ಮಧ್ಯದಲ್ಲಿಯೇ ಬಿಡುವರಿಗೆ ಶಾಲೆಬಿಡುವವರು ಎಂದು ಕರೆಯಲಾಗಿದೆ.

ಹಲವಾರು ಕಾರಣಗಳಿಂದ ತಮ್ಮ ಶಿಕ್ಷಣವನ್ನು ಪೂರ್ಣಗೊಳಿಸದೇ ಶಾಲೆ ಬಿಡುವುದು ಎನ್ನಬಹುದು.

**ಅಧ್ಯಯನದ ಉದ್ದೇಶಗಳು**

''ಪ್ರಾಥಮಿಕ ಶಿಕ್ಷಣದಲ್ಲಿ ಶಾಲೆ ಬಿಡುವಿಕೆ: ಮುಸ್ಲಿಂ ಸಮುದಾಯದಲ್ಲಿ ಲಿಂಗಾಧಾರಿತ ನೆಲೆಯನ್ನು ಅನುಲಕ್ಷಿಸಿ'' ಎಂಬ ವಿಷಯದ ಮೇಲೆ ಅಧ್ಯಯನ ಮಾಡುವಾಗ ಈ ಕೆಳಗಿನ ಗುರಿಯನ್ನು ಇಟ್ಟು ಕೊಳ್ಳಲಾಗಿದೆ. ಶಾಲೆಬಿಡಲು ಕಾರಣಗಳೇನು ಮತ್ತು ಅವರು ಶಾಲೆ ಬಿಡದ ಹಾಗೆ ಸರ್ಕಾರವು ಯಾವ

ಯಾವ ಕ್ರಮುಗಳನ್ನು ಯೋಜನೆಗಳನ್ನು ಕೈಗೊಳ್ಳಲಾಗಿದೆ. ಎಂಬುದೇ ಅಧ್ಯಯನದ ಗುರಿಯಾಗಿದೆ. ಆದರೂ ಈ ಯೋಜನೆಗಳು ಯಶಸ್ವಿ ಗೊಳ್ಳುತಿಲ್ಲಾ ಏಕೆ ಎನ್ನುವದನ್ನು ಅರಿಯಲು ಪ್ರಯತ್ನಿಸಲಾಗಿದೆ.

೧. ಪ್ರಾಥಮಿಕ ಶಿಕ್ಷಣ ಹರಡುವಿಕೆಯಲ್ಲಿ ಯಾವ ಅಂಶಗಳು ಸಹಾಯವಾಗಿವೆ ಎಂಬುದು ಅಧ್ಯಯನದ ಉದ್ದೇಶವಾಗಿದೆ.

೨. ಪ್ರಾಥಮಿಕ ಶಿಕ್ಷಣ ಹರಡುವಿಕೆಯಲ್ಲಿ ಧರ್ಮಗಳ ಪಾತ್ರ ಏನು ಎಂಬುದು ಅದ್ಯಯನದ ಉದ್ದೇಶವಾಗಿದೆ. ಅದರಲ್ಲೂ ಮುಸ್ಲಿಂ ಧರ್ಮದಲ್ಲಿ ಮಹಿಳೆಯನ್ನು ಯಾವ ಶಿಕ್ಷಣಕ್ಕೆ ಹೆಚ್ಚು ಮಹತ್ವ ನೀಡಲಾಗಿದೆ, ಎಂಬುದೇ ಅಧ್ಯಯನದ ಉದ್ದೇಶವಾಗಿದೆ.

೩. ಪ್ರಾಥಮಿಕ ಶಿಕ್ಷಣ ಹರಡುವಿಕೆಯಲ್ಲಿ ಲಿಂಗದಪಾತ್ರ, ಶಿಕ್ಷಣ ಕೊಡುವುದರಲ್ಲಿ ಮಹಿಳೆ ಮತ್ತು ಪುರುಷರನ್ನು ಯಾವ ರೀತಿ ಬೇಧಭಾವ ಮಾಡಿ ನೋಡುವರು ಎಂಬುದು ಅಧ್ಯಯನದ ಉದ್ದೇಶವಾಗಿದೆ.

೪. ಮಕ್ಕಳು ಮಧ್ಯದಲ್ಲಿಯೇ ಶಾಲೆ ಬಿಡಲು ಕಾರಣಗಳಾವುವು ಎಂದು ವಿಶ್ಲೇಷಿಸುವುದು ಅಧ್ಯಯನದ ಉದ್ದೇಶವಾಗಿದೆ.

೫. ಮಕ್ಕಳು ಪ್ರತಿದಿನ ಶಾಲೆಗೆ ಬರುವಂತೆ ಸರ್ಕಾರ ಯಾವ ಯಾವ ಕ್ರಮುಗಳನ್ನು ಹಾಕಿಕೊಂಡಿದೆ ಎಂದು ವಿಶ್ಲೇಷಿಸುವುದು ಅಧ್ಯಯನದ ಉದ್ದೇಶವಾಗಿದೆ.

ಸಮಸ್ಯೆಗಳಿಗೆ ಕಾರಣಗಳೇನು ಗುರುತಿಸಿ, ಅವುಗಳನ್ನು ನಿವಾರಿಸಲು ಯಾವ ಯಾವ ಕ್ರಮುಗಳಿವೆ ಆ ಕ್ರಮುಗಳ ನಂತರ ಪರ್ಯಾರ್ಯವೇನು ಎಂಬುದು ತಿಳಿಯಬೇಕಾಗಿದೆ.

ನನ್ನ ಅಧ್ಯಯನಕ್ಕೆ ಕೊಪ್ಪಳ ಜಿಲ್ಲೆಯಲ್ಲಿ ಬರುವ ಗಂಗಾವತಿ ತಾಲೂಕನ್ನು ಆಯ್ಕೆ ಮಾಡಿಕೊಂಡಿದ್ದು ಕೊಪ್ಪಳವು ಹೈದ್ರಾಬಾದ ಸಂಸ್ಥಾನಕ್ಕೆ ಸೇರಿದ ಒಂದು ಪ್ರಾಂತ್ಯವಾಗಿದೆ. ಇದು ಹಿಂದುಳಿದ ಪ್ರಾಂತ್ಯಗಳಲ್ಲಿ ಒಂದಾಗಿದೆ, ಈ ಪ್ರಾಂತ್ಯವು ನಿಜಾಮರಿಂದ ಆಳಲ್ಪಟಿದ್ದು ನಿಜಾಮರು ತಮ್ಮ ಪ್ರಭುತ್ವವನ್ನು ಒಪ್ಪಿಕೊಳ್ಳುವಂತೆ ಒತ್ತಾಯ ತರುತ್ತಿದ್ದರು. ಒಂದು ವೇಳೆ ಒಪ್ಪಿಕೊಳ್ಳದಿದ್ದರೆ ಅತ್ಯಾಚಾರಗಳು, ದರೋಡೆಗಳು, ಕೊಲೆಗಳು ಈ ಪ್ರಾಂತ್ಯದಲ್ಲಿ ನಿತ್ಯವೂ ನಡೆಯುತ್ತಿದ್ದವು. ಹೀಗಾಗಿ ಶೈಕ್ಷಣಿಕವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ ಹಿಂದುಳಿದಿದ್ದರು ಎನ್ನುವುದು ನನ್ನ ಊಹೆ ಇದಕ್ಕೆ ನಿಜಾಮರ ಆಡಳಿತ ಧೋರಣೆಗಳನ್ನು ತಿಳಿದುಕೊಳ್ಳುವ ಅಗತ್ಯವಿದೆ.

ವರ್ಗ, ಧರ್ಮ, ರಾಜಕಾರಣಗಳ ಜೊತೆಗೆ ಪ್ರಾದೇಶಿಕ ರಾಜಕಾರಣವು ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಅಭಿವೃದ್ಧಿ ಮೇಲೆ ಯಾವರೀತಿ ಪ್ರಭಾವ ಬೀರಿದೆ ಎನ್ನುವುದನ್ನು ವಸ್ತುನಿಷ್ಠವಾಗಿ

ವಿಶ್ಲೇಷಿಸುವ ತುರ್ತಿದೆ. ಸಮಾಜಿಕವಾಗಿ ದೊರೆತ ಎಲ್ಲಾ ಮೂಲಭೂತ ಸೌಕರ್ಯಗಳು ಮುಸ್ಲಿಂ ಮಹಿಳೆಯರಿಗೆ ಯಾಕೆ ತಲುಪುತ್ತಿಲ್ಲ ಹಾಗೂ ಅದರ ಹಿಂದರುವ ರಾಜಕಾರಣವನ್ನು ವಿಶ್ಲೇಷಿಸುವ ಅವಶ್ಯಕತೆ ಇದೆ.

ಮುಸ್ಲಿಂ ಸಮುದಾಯದಲ್ಲಿ ಮಹಿಳೆಯರು ಎಷ್ಟರ ಮಟ್ಟಿಗೆ ಶಿಕ್ಷಣಮಟ್ಟವನ್ನು ಪಡೆದುಕೊಂಡಿದ್ದಾರೆ ಅದರಲ್ಲೂ ಮಹಿಳೆಯರಿಗೆ ಯಾವ ಪ್ರಮಾಣದಲ್ಲಿ ಶಿಕ್ಷಣ ದೊರೆತಿದೆ, ಎಂತಹ ಶಿಕ್ಷಣ ದೊರೆತಿದೆ, ಇಲ್ಲವೆ ಅವರಿಗೆ ಶಿಕ್ಷಣವು ಏಕೆ ಗಗನ ಕುಸುಮವಾಗಿದೆ ಎನ್ನುವುದನ್ನು ಚರ್ಚಿಸುವ ತುರ್ತಿದೆ. ಧರ್ಮದೊಳಗಿನ ಲಿಂಗ ತಾರತಮ್ಯವನ್ನು ಗುರುತಿಸಲಾಗಿದೆ ಮತ್ತು ಲಿಂಗ ವ್ಯತ್ಯಾಸಗಳು ಧರ್ಮಗಳಿಗನುಗುಣವಾಗಿ ಹೇಗೆ ಭಿನ್ನವಾಗಿರುತ್ತವೆ, ಎಂಬ ಕಾರಣಗಳನ್ನು ಕ್ಷೇತ್ರ ಕಾರ್ಯದ ಮೂಲಕ ಕಂಡುಕೊಳ್ಳಲು ಉದ್ದೇಶಿಸಲಾಗಿದೆ.

ಹೈದ್ರಾಬಾದ್ ಕರ್ನಾಟಕ ಭೌಗೋಳಿಕ ವ್ಯಾಪ್ತಿಯನ್ನು ಗಮನದಲ್ಲಿಟ್ಟುಕೊಂಡು ಈ ಭೌಗೋಳಿಕ ಪರಿಸರದ ಚಾರಿತ್ರಿಕ ಹಿನ್ನಲೆಯಲ್ಲಿ ಶಿಕ್ಷಣದ ಗುಣಮಟ್ಟವನ್ನು ಅವಲೋಕಿಸುವ ಪ್ರಯತ್ನ ಮಾಡಲಾಗಿದೆ. ಸ್ವತಂತ್ರೋತ್ತರ ಕಾಲದಿಂದಲೂ ಈ ಪ್ರಾಂತ್ಯದಲ್ಲಿ ಯಾಕೆ ಸಾಕ್ಷರತೆಯ ಪ್ರಮಾಣವು ಹಿಮ್ಮುಖವಾಗಿತ್ತು, ಇಪ್ಪತ್ತೊಂದನೆಯ ಶತಮಾನದ ಹಾದಿಯಲ್ಲಿಯೂ ಈ ಪ್ರಾಂತ್ಯದ ಮುಸ್ಲಿಂ ಸಮುದಾಯದ ಮಹಿಳೆಯರಿಗೆ ಸಾಕ್ಷರತೆ ಏಕೆ ದಕ್ಕುತ್ತಿಲ್ಲ, ಸರಕಾರವು ಹಮ್ಮಿಕೊಳ್ಳುವ ಕಾರ್ಯ ಕ್ರಮಗಳು ಈ ಭಾಗದಲ್ಲಿ ಮುಸ್ಲಿಂ ಸಮುದಾಯದ ಮಹಿಳೆಯರಿಗೆ ಏಕೆ ಕೈಗೆಟಕುತ್ತಿಲ್ಲ, ಹೀಗೆ ಹಲವಾರು ಪ್ರಶ್ನೆಗಳು ಈ ಅಧ್ಯಯನದ ಸಂದರ್ಭದಲ್ಲಿ ಹಾಕಿಕೊಳ್ಳಲಾಗಿದೆ.

ಸಂವಿಧಾನ ಅಲ್ಪಸಂಖ್ಯಾತರ ರಕ್ಷಣೆಗೆಂದು ಅದರಲ್ಲೂ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಹಿತಾಸಕ್ತಿಗಳನ್ನು ಗಮನದಲ್ಲಿಟ್ಟುಕೊಂಡು ಹಲವಾರು ವಿಧಿಗಳು ಜಾರಿಗೆ ಬಂದವು. ಅದರಲ್ಲಿಯೂ ಹೈದ್ರಾಬಾದ ಕರ್ನಾಟಕದ ವ್ಯಾಪ್ತಿಯಲ್ಲಿ ಬರುವ ಕೊಪ್ಪಳ ಜಿಲ್ಲೆಯಲ್ಲಿ ಮಹಿಳೆಯರು ಶೈಕ್ಷಣಿಕವಾಗಿ ಏಕೆ ಹಿಂದುಳಿದಿದ್ದಾರೆ, ಎಂಬುದು ತಿಳಿಯುವುದು ಅವಶ್ಯಕಾವಾಗಿದೆ.

ಶೈಕ್ಷಣಿಕ ಸಮಾನತೆಯನ್ನು ಪಡೆಯಬೇಕಾದರೆ ಪ್ರಾದೇಶಿಕವಾಗಿ ಹರಡಿಕೊಂಡಿರುವ ಅಸಮಾನತೆ ಮತ್ತು ವೈಷಮ್ಯವನ್ನು ಸರಿಪಡಿಸಬೇಕಾಗಿದೆ. ಗ್ರಾಮೀಣ ಹಾಗೂ ಇತರ ಹಿಂದುಳಿದ ಪ್ರದೇಶಗಳಲ್ಲಿ ಉತ್ತಮ ಶೈಕ್ಷಣಿಕ ಅನುಕೂಲತೆಗಳನ್ನು ಒದಗಿಸುವುದರ ಜೊತೆಗೆ ಸಾಮಾಜಿಕ ಒಮ್ಮತ ಮತ್ತು ರಾಷ್ಟ್ರೀಯ ಒಕ್ಕೂಟಗಳ ಬೆಳವಣಿಗೆಗೆ ಸಾಮನ್ಯ ಶಾಲಾ ಪದ್ಧತಿಯನ್ನು ಜಾರಿಗೆ ತರಬೇಕಾಗಿದೆ.

ಶಿಕ್ಷಣ ಸೌಕರ್ಯದ ಕೊರತೆ ಹೆಚ್ಚು ದಟ್ಟಣೆಯ ತರಗತಿಗಳು ಅಶಿಸ್ತಿನ ವ್ಯಾಸಾಂಗ ಕ್ರಮ ಶಾಲಾ ಜೀವನಕ್ಕೆ ಮಕ್ಕಳನ್ನು ಉತ್ಸಾಹದೊಡನೆ ತೊಡಗಿಸಲು ಶೈಕ್ಷಣಿಕ ತಂತ್ರಗಳ ಕೊರತೆ ಶಿಕ್ಷಕರ ಅಪೂರ್ವ ಸಿದ್ಧತೆ ಮತ್ತು ಪರಿಕ್ಷೆಗಳ ತಪ್ಪು ಪದ್ಧತಿಗಳು, ಸಂಪ್ರದಾಯ, ಆಚರಣೆಗಳು ಮೊದಲಾದವುಗಳು ಶಾಲೆ ಬಿಡಿವಿಕೆಗೆ ಇರುವ ಕಾರಣಗಳೆಂದು ಇದುವರೆಗಿನ ಅಧ್ಯಯನಗಳು ಗುರುತಿಸಿವೆ. ಅವುಗಳನ್ನು ನಿವಾರಿಸುವ ನಿಟ್ಟಿನಲ್ಲಿ ಪರಿಹಾರಗಳನ್ನು ಕಂಡುಕೊಳ್ಳಬೇಕಾಗಿದೆ.

ಧರ್ಮದಲ್ಲಿನ ಪಿತೃಪ್ರಧಾನಮೌಲ್ಯಗಳು ಶಿಕ್ಷಣದ ಹಂತದಲ್ಲಿಯೂ ಪ್ರಧಾನ ಪಾತ್ರ ಮಾಡುತ್ತದೆ. ಮಹಿಳಾ ಶಿಕ್ಷಣ ಕುರಿತು ವಸಾಹತುಶಾಹಿ ತಂದ ಹೊಸ ಗಾಳಿಯು ಭಾರತದಲ್ಲಿ ಸ್ವತಂತ್ರ್ಯ ನಂತರದಲ್ಲೂ ಮುಂದುವರೆಯುತ್ತಾದರೂ ಅದು ಏಕೆ ಮುಸ್ಲಿಂ ಮಹಿಳೆಯ ಪಾಲಿಗೆ ಮರೀಚಿಕೆಯಾಗಿಯೇ ಉಳಿಯಿತು ಎನ್ನುವುದನ್ನು ವಿಶ್ಲೇಷಿಸುವ ಅಗತ್ಯವಿದೆ. ಇದಕ್ಕೆ ಸರ್ಕಾರದ ಯೋಜನೆಗಳಲ್ಲಿನ ಲೋಪದೋಷವೋ ಅಥವಾ ಧರ್ಮದಲ್ಲಿನ ಪಿತೃ ಪ್ರಧಾನ ಮೌಲ್ಯಗಳ ಪ್ರಾಭಲ್ಯವೋ ಎನ್ನುವುದನ್ನು ಚರ್ಚಿಸುವ ಅಗತ್ಯವಿದೆ.

ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಪ್ರಗತಿಗಾಗಿ ಗೊಡ್ಡು ಕಾರ್ಯಾಚರಣೆಯನ್ನು ಮಾಡ-ಬೇಕಾಗಿದೆ. ಶಿಕ್ಷಣದ ಎಲ್ಲಾ ಹಂತಗಳಲ್ಲಿ ಮುಸ್ಲಿಂ ಹೆಣ್ಣು ಮಕ್ಕಳ ನೊಂದಣಿ ಪ್ರಮಾಣ ಸುಧಾರಿಸಿಕೊಂಡರೂ ಇನ್ನೂ ಹೈದ್ರಾಬಾದ ಕರ್ನಾಟಕದ ಪ್ರಾಂತ್ಯಗಳಲ್ಲಿ ಶಾಲೆಬಿಡುವವರ ಪ್ರಮಾಣ ಹೆಚ್ಚಾಗಿಯೇ ಕಂಡು ಬರುತ್ತದೆ. ಸರಕಾರ ಹಾಗೂ ಸಮಾಜಿಕ ಸೇವಾ ಸಂಸ್ಥೆಗಳು ಮುಸ್ಲಿಂ ಮಹಿಳೆಯರ ಶಿಕ್ಷಣದ ಪ್ರಸಾರದ ಸಲುವಾಗಿ ಇನ್ನೂ ಹಲವಾರು ಯೋಜನೆಗಳನ್ನು ರೂಪಿಸಿ ಅಳವಡಿಸಿ ಕೊಳ್ಳಬೇಕಾಗಿದೆ. ಅಂದಾಗ ಮಾತ್ರ ಹಿಂದುಳಿದ ಪ್ರದೇಶಗಳಲ್ಲಿ ಇರುವ ಮುಸ್ಲಿಂ ಮಹಿಳಾ ಸಮುದಾಯಕ್ಕೆ ಶಿಕ್ಷಣ ದೊರೆತಂತಾಗುತ್ತದೆ.

## ಅಧ್ಯನದ ವ್ಯಾಪ್ತಿ

ಈ ಅಧ್ಯಯನ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿಗೆ ಮಾತ್ರ ಸೀಮಿತಗೊಳಿಸಿದ್ದೇನೆ. ಈ ಅಧ್ಯಯನ ವಿಶೇಷವಾಗಿ ಮುಸ್ಲಿಂ ಸಮುದಾಯದಲ್ಲಿ ಮಹಿಳೆಯರು ಮಧ್ಯದಲ್ಲಿಯೇ ಶಾಲೆ ಬಿಡಲು ಕಾರಣಗಳೇನು ಮತ್ತು ಇವರ ಶೈಕ್ಷಣಿಕ ಅಭಿವೃದ್ಧಿಗೆ ಸರ್ಕಾರದ ಪ್ರೇರಕ ಅಂಶಗಳು ಯಾವುವು ಎಂದು ವಿಶ್ಲೇಷಿಸುವುದಾಗಿದೆ. ಅಧ್ಯಯನ ಕ್ಷೇತ್ರ ಕಾರ್ಯದ ದೃಷ್ಟಿಯಿಂದ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕು ಮಾತ್ರ ಆಯ್ಕೆ ಮಾಡಿಕೊಂಡಿದ್ದೇನೆ.

## ಅಧ್ಯನದ ಮಹತ್ವ

ಪ್ರತಿಯೊಂದು ಪ್ರಜೆಗೂ ಶಿಕ್ಷಣವು ಅತಿ ಅವಶ್ಯಕವಾಗಿದ್ದು, ಅದರಲ್ಲೂ ಸ್ತ್ರೀಯ ಶಿಕ್ಷಣವು ಕುಟುಂಬದ ರಾಷ್ಟ್ರದ ರಾಜ್ಯದ ಅಭಿವೃದ್ಧಿಯ ಬುನಾದಿಯಾಗಿದೆ. ಅಶಿಕ್ಷಿತ ಪೀಳಿಗೆಗಳು ಅಶಿಕ್ಷಿತ ಪೀಳಿಗೆಗಳಿಗೆ ಜನ್ಮ ನೀಡುತ್ತವೆ ಆದ್ದರಿಂದ ಮುಂದಿನ ಪೀಳಿಗೆಗಳಿಗೆ ಜನ್ಮ ನೀಡುತ್ತವೆ ಆದ್ದರಿಂದ ಮುಂದಿನ ಪೀಳಿಗೆಯನ್ನು ಶಿಕ್ಷಿತಗೊಳಿಸಲು ಇಂದಿನ ಪೀಳಿಗೆಯಲ್ಲಿ ಜಾಗೃತಿಯುಂಟು ಮಾಡಬೇಕಾದ ಅಗತ್ಯ ವಿದೆ. ಒಬ್ಬ ಅಶಿಕ್ಷಿತ ತಾಯಿಯು ಅಶಿಕ್ಷಿತ ತಾಯಿಯಾಗಬಲ್ಲಳು ಸಮಾಜದ ಅರ್ಧ ಭಾಗವನ್ನು ಅಜ್ಞಾನದ ಕತ್ತಲಲ್ಲಿ ಕಟ್ಟಿಡುವ ಬೆಳಕನ್ನು ಪಡೆಯಲಾರದು. ಮುಸ್ಲಿಂ ಮಹಿಳೆಯರ ಶಿಕ್ಷಣವನ್ನು ಯಾಕೆ ನಿರ್ಲಕ್ಷಿಸಲಾಗಿದೆ ಶಿಕ್ಷಣ ದೊರಕಿದರೂ ಅದರಲ್ಲಿ ಶಾಲೆಯನ್ನು ಪೂರ್ಣಗೊಳಿಸದೇ ಅರ್ಧದಲ್ಲೇ ಶಾಲೆ ಬಿಡಲು ಕಾರಣಗಳೇನು? ಎಂಬುದು ಅರಿಯುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

## ಅಧ್ಯಯನದ ವಿಧಾನಗಳು

**"ಪ್ರಾಥಮಿಕ ಶಿಕ್ಷಣದಲ್ಲಿ ಶಾಲೆಬಿಡುವಿಕೆ:ಮುಸ್ಲಿಂ ಸಮುದಾಯದಲ್ಲಿ ಲಿಂಗಾಧಾರಿತ ನೆಲೆಯನ್ನು ಅನುಲಕ್ಷಿಸಿ"** ಎಂಬ ಅಧ್ಯಯನಕ್ಕೆ ಮಾಹಿತಿ ಸಂಗ್ರಹಿಸಲು ಕೆಲವು ವಿಧಾನಗಳನ್ನು ಆಯ್ಕೆ ಮಾಡಿಕೊಳ್ಳಲಾಗಿ ದೆ. ಅಧ್ಯಯನ ಮಾಡಲು ಹಲವಾರು ಸಂಶೋಧನ ವಿಧಾನಗಳಿದ್ದರೂ ನನ್ನ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಕೆಲವೇ ವಿಧಾನಗಳ ಬಗ್ಗೆ ಚರ್ಚಿಸಲಾಗಿದೆ. ಈ ಅಧ್ಯಯನವನ್ನು ಪ್ರಾಯೋಗಿಕ ಅನುಭವದ ಆಧಾರದ ಮೇಲೆ ರೂಪಿಸಲು ಪ್ರಯತ್ನ ಮಾಡಲಾಗಿದೆ.

## ಏಕ ವಿಷಯಕ ಅಧ್ಯಯನ

ಆಯ್ದ ವ್ಯಕ್ತಿಗಳು ಅಥವಾ ಗುಂಪುಗಳ ಜೀವನಕ್ಕೆ ಸಂಬಂಧಿಸಿದ ವಿವಿಧ ಆಂಶಗಳ ಬಗ್ಗೆ ಆಳವಾದ ಅಧ್ಯಯನವನ್ನು ಕೈಗೊಳ್ಳುವ ಒಂದು ಕ್ರಮವೇ ಏಕ ವಿಷಯಕ ಅಧ್ಯಯನ.

ಅಧ್ಯಯನ ವಿಷಯಕ್ಕೆ ಏಕ ವಿಷಯಕ ತುಂಬಾ ಮಹತ್ವವಾಗಿದೆ. ಈ ತಂತ್ರ ವಿಧಾನದಿಂದ ಪ್ರಾಥಮಿಕ ಶಾಲೆಯಲ್ಲಿ ಹೆಣ್ಣುಮಗು ಮಧ್ಯದಲ್ಲಿಯೇ ಶಾಲೆ ಬಿಡಲು  ಕಾರಣಗಳೇನು ಮತ್ತು  ಶಾಲೆಗೆ ಬರುವಂತೆ ಸರ್ಕಾರ ಹಾಕಿಕೊಂಡ ಕ್ರಮಗಳೇನು ಎಂದು ಅರಿಯ  ಬೇಕಾದುದು  ಈ ಅಧ್ಯಯನದ ಧ್ಯೇಯವಾಗಿದೆ.

**ಅವಲೋಕನ**

ವಲೋಕನವು ಸಮಾಜಿಕ ಸಂಶೋಧನೆಗಳಲ್ಲಿ ಮಾಹಿತಿ ಸಂಗ್ರಹಣೆಗಾಗಿ ಬಳಸಲಾಗುತ್ತಿರುವ ಮುಖ್ಯ ತಂತ್ರ ಸಾಧನ 'ಅವಲೋಕನ' ಎಂಬ ಪದಕ್ಕೆ ವ್ಯವಸ್ಥಿತ ವೀಕ್ಷಣೆ ಗಮನವಿಟ್ಟು ನೋಡುವುದು ಅಥವಾ ಉದ್ದೇಶ ಪೂರ್ವಕವಾದ ಅಥವ ಲಕ್ಷವಿಟ್ಟು ಗಮನಿಸುವ ಕ್ರಿಯೆ.

ಅಧ್ಯಯನ ವಿಷಯಕ್ಕೆ ಮಾಹಿತಿ ಸಂಗ್ರಹಿಸಲು ಏಕವಿಷಯದ ಅಧ್ಯಯನ ಮಾಡುವದರ ಜೊತೆಗೆ ಅವಲೋಕನವು ಸಹಕಾರಿಯಾಗಿದೆ. ``ಪ್ರಾಥಮಿಕ ಶಿಕ್ಷಣದಲ್ಲಿ ಶಾಲೆಬಿಡುವಿಕೆ :ಮುಸ್ಲಿಂ ಸಮುದಾಯದಲ್ಲಿ ಲಿಂಗಾಧಾರಿತ ನೆಲೆಯನ್ನು ಅನುಲಕ್ಷಿಸಿ`` ಅಧ್ಯಯನ ಮಾಡುವಾಗ ಕೆಲವೊಂದು ವಿಷಯಗಳನ್ನು ನೋಡುವುದರ ಮೂಲಕ ಮಾಹಿತಿ ಸಂಗ್ರಹಿಸ ಬಹುದಾಗಿದೆ.

**ನಮೂನೆ**

ನನ್ನ ಅಧ್ಯಯನದ ವಿಷಯ **"ಪ್ರಾಥಮಿಕ ಶಿಕ್ಷಣದಲ್ಲಿ ಶಾಲೆಬಿಡುವಿಕೆ: ಮುಸ್ಲಿಂ ಸಮುದಾಯದಲ್ಲಿ ಲಿಂಗಾಧಾರಿತ ನೆಲೆಯನ್ನು ಅನುಲಕ್ಷಿಸಿ"** ಈ ಶೀರ್ಷಿಕೆಯ ಅಡಿಯಲ್ಲಿ ಈ ನನ್ನ ಅಧ್ಯಯನಕ್ಕೆ ಒಟ್ಟು ೧೧ ಶಾಲೆಯನ್ನು ಆಯ್ಕೆ ಮಾಡಿಕೊಳ್ಳುತ್ತೇನೆ ಅದರಲ್ಲಿ ವಿಶೇಷವಾಗಿ ಮುಸ್ಲಿಂ ಧರ್ಮದ ಹೆಣ್ಣು ಮತ್ತುಗಂಡು ಮಕ್ಕಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

**ಮಾಹಿತಿಯ ಮೂಲಗಳು**

ಒಂದು ಸಂಶೋಧನೆ ವಿಷಯವನ್ನು ಆಧರಿಸಿಕೊಂಡು ಪ್ರಾಕಲ್ಪನೆಯನ್ನು ಪರೀಕ್ಷಿಸಲು ಸೂಕ್ತವಾದ ವಿನ್ಯಾಸವನ್ನು ನಿರ್ಧರಿಸಿಕೊಂಡ ಮೇಲೆ ಅಧ್ಯಯನದಲ್ಲಿ ಮುಂದಿನ ಹೆಜ್ಜೆ ದತ್ತಾಂಶಗಳು ಸಂಗ್ರಹಣೆಯಾಗಿದೆ. ದತ್ತಾಂಶಗಳ ಸಂಗ್ರಹಣೆಗಳನ್ನು ಎರಡು ಮೂಲಗಳಿಂದ ಮಾಡಿಕೊಳ್ಳುತೇನೆ.

**ಪ್ರಾಥಮಿಕ ಮೂಲ**

ಸಂಶೋಧಕರು ತಮ್ಮ ವಿಷಯಕ್ಕೆ ಅವಲೋಕನ ಸಂದರ್ಶನ, ಪ್ರಶ್ನಾವಳಿ ಮುಂತಾದ ಸಂಶೋಧನಾ ತಂತ್ರಗಳನ್ನು ಬಳಸಿ ಸಂಗ್ರಹಿಸುವ ಮಾಹಿತಿಯೇ ಪ್ರಾಥಮಿಕ ಮಾಹಿತಿಯಾಗಿದೆ. ಪ್ರಾಥಮಿಕ ಮಾಹಿತಿಯನ್ನು ಸಂಗ್ರಹಿಸುವ ವಿಧಾನದಲ್ಲಿ ಕ್ಷೇತ್ರ ಕಾರ್ಯವು ಪ್ರಮುಖ ಪಾತ್ರ ನಿರ್ವಹಿಸುತ್ತದೆ.ಸಮುದಾಯಕ್ಕೆ ನೇರವಾಗಿ ಹೋದಾಗಲು ಕ್ಷೇತ್ರಕಾರ್ಯದ ಮೂಲಕ ಈ ಮಾಹಿತಿಯನ್ನು ಸಂಗ್ರಹಿಸಲು ಸಾಧ್ಯವಾಗುವುದು.

**ಅನುಷಂಗಿಕ ಮೂಲಗಳು**

ಪ್ರಕಾಶಿತವಾದ ಮತ್ತು ಪ್ರಕಾಶಿಸಲ್ಪಡದೇ ಇರುವ ಖಾಸಗಿಯಾದ ಇಲ್ಲವೆ ಸಾರ್ವಜನಿಕ ಸ್ವರೂಪದ ದಾಖಲೆಗಳಿಂದ ಅಥವ ಅಂತಹ ಇತರೆ ಮೂಲಗಳಿಂದ ಸಂಗ್ರಹಿಸಿದ ಮಾಹಿತಿಗಳು ಈ ವರ್ಗಕ್ಕೆ ಸೇರಿಕೊಳ್ಳುತ್ತವೆ. ಆಯ್ಕೆ ಮಾಡಿಕೊಂಡ ವಿಷಯಕ್ಕೆ ಸಂಬಂಧಿಸಿದಂತೆ ಈ ಹಿಂದೆ ಮಾಡಲಾಗಿರುವ ಅಧ್ಯಯನಗಳನ್ನು ಆಧಾರವಾಗಿಟ್ಟು ಕೊಳ್ಳಲಾಗುವುದು ಲೇಖಕರ ವೃತ್ತ ಪತ್ರಿಕೆಗಳು, ಲೇಖನೆಗಳು ಜೊತೆಗೆ ವೈಯಕ್ತಿಕ ದಾಖಲೆಗಳು, ದಿನಚರಿಗಳು, ಅನುಭವಗಳ ದಾಖಲೆಗಳು, ಜೀವನ ಚರಿತ್ರೆಗಳು ನಮ್ಮ ಅಧ್ಯಯನಕ್ಕೆ ನೆರವಾಗುತ್ತವೆ. ಹೀಗೆ ಆಯ್ಕೆ ಮಾಡಿಕೊಂಡ ವಿಷಯದ ಮಾಹಿತಿ ಸಂಗ್ರಹಿಸಲು ಪ್ರಾಥಮಿಕ ಮತ್ತು ಅನುಷಂಗಿಕ ಎರಡು ಮೂಲಗಳಿಂದ ದತ್ತಾಂಶ ಸಂಗ್ರಹಣೆ ಮಾಡಿಕೊಳ್ಳಲಾಗಿದೆ.

**ವಿನ್ಯಾಸ**

ಸಂಶೋಧನ ವಿನ್ಯಾಸ ಎಂಬುದು ಸಂಶೋದನ ಕಾರ್ಯದಲ್ಲಿನ ಬಹಳ ಮುಖ್ಯವಾದ ಹಂತವಾಗಿರುತ್ತದೆ ಸುಶೋಧನೆಯ ಉದ್ದೇಶವನ್ನು ಪೂರೈಸುವುದಕ್ಕೊಸ್ಕರ ಸಂಶೋಧಕನು ತನ್ನ ಸಂಶೋಧನ ಪ್ರಕ್ರಿಯೆಯನ್ನು ಸಮಗ್ರವಾಗಿ ಆಲೋಚನೆ ಮಾಡಿ ತಯಾರಿಸಿದ ಯೋಜನೆಯೊಂದನ್ನು `ಸಂಶೋಧನ ವಿನ್ಯಾಸ' ಎಂದು ಹೇಳಬಹುದಾಗಿದೆ.

ಸಂಶೋಧನ ವಿನ್ಯಾಸವು ಸಂಶೋಧನಾ ಕಾರ್ಯದ ಬಗ್ಗೆ ಸಾಕಷ್ಟು ಸಮಗ್ರವಾದ ಮಾಹಿತಿ ನೀಡುವ `ನೀಲಿನಕಾಶೆ' ಯಂತೆಯೇ ಕಾರ್ಯನಿರ್ವಹಿಸುತ್ತದೆ.

ಪ್ರಾಕಲ್ಪನೆಯನ್ನು ಸ್ಥಾಪಿಸಿದಲ್ಲಿಂದ ಹಿಡಿದು ಕೊನೆಗೆ ಮಾಹಿತಿಯನ್ನು ವಿಶ್ಲೇಷಿಸಿ ವರದಿ ತಯಾರಿಸುವ ಹಂತದ ವರೆಗೂ ಸಂಶೋಧಕನು ಏನೇನು ಮಾಡುತ್ತಾನೆಂಬುದನ್ನು ಸಂಶೋಧನಾ ವಿನ್ಯಾಸವು ಆರಂಭದಲ್ಲಿಯೇ ಸೂಚಿಸುತ್ತದೆ.

ಅಧ್ಯಯನದ ವಿನ್ಯಾಸವು ಇಡೀ ಪ್ರಬಂಧಕ್ಕೆ ಹಾಕಿಕೊಂಡಿರುವಂತಹ ವ್ಯವಸ್ಥೆಯಾಗಿದೆ (ವಿವಿಧ ಅಧ್ಯಯನಗಳು) **"ಪ್ರಾಥಮಿಕ ಶಿಕ್ಷಣದಲ್ಲಿ ಶಾಲೆಬಿಡುವಿಕೆ; ಮುಸ್ಲಿಂ ಸಮುದಾಯದಲ್ಲಿ ಲಿಂಗಾಧಾರಿತ ನೆಲೆಯನ್ನು ಅನುಲಕ್ಷಿಸಿ"** ಎಂಬ ಶೀರ್ಷಿಕೆ ಅಡಿಯಲ್ಲಿ ಒಟ್ಟು ಎಂಟು ಅಧ್ಯಯಗಳನ್ನು ಆಯ್ಕೆಮಾಡಿಕೊಳ್ಳಲಾಗಿದ್ದು ಅವು ಈ ರೀತಿಯಾಗಿವೆ.

ಮೊದಲನೆ ಅಧ್ಯಯ ದಲ್ಲಿ ಪೀಠಿಕೆ, ಉದ್ದೇಶ, ವ್ಯಾಪ್ತಿ, ಮಹತ್ವ , ವಿಧಾನ, ವಿನ್ಯಾಸ

ಎರಡನೇ ಅಧ್ಯಯದಲ್ಲಿ ಪ್ರಾಥಮಿಕ ಶಿಕ್ಷಣ ಹರಡುವಿಕೆಯ ನಿರ್ಧಾರಕ ಅಂಶಗಳು,

ಮೂರನೇ ಅಧ್ಯಯದಲ್ಲಿ ಕರ್ನಾಟಕದಲ್ಲಿ ಜನಗಣತಿ ಮತ್ತು ಶಾಲಾ ಗಣತಿಯಲ್ಲಿನ ಅಂಕಿಅಂಶಗಳ ವಿಶ್ಲೇಷಣೆ.

ನಾಲ್ಕನೇ ಅಧ್ಯಯದಲ್ಲಿ ಶಿಕ್ಷಣ ಹರಡುವಿಕೆಯಲ್ಲಿ ಧರ್ಮಗಳಪಾತ್ರ.

ಐದನೇ ಅಧ್ಯಯವು ಶಿಕ್ಷಣ ಹರಡುವಿಕೆಯಲ್ಲಿ ಲಿಂಗದ ಪಾತ್ರ.

ಆರನೇ ಅಧ್ಯಯದಲ್ಲಿ ಶಾಲಾ ಬಿಡುವಿಕೆಗೆ ಸಂಬಂಧಿಸಿದ ಪ್ರಕರಣಗಳ ಪರಿಶೀಲನೆ.

ಏಳನೇ ಅಧ್ಯಾಯದಲ್ಲಿ ಮುಸ್ಲಿಂ ಸಮುದಾಯ; ಮಹಿಳೆ; ಶಿಕ್ಷಣ : ಸರ್ಕಾರಿ ಯೋಜನೆಗಳು.

ಎಂಟನೇ ಅಧ್ಯಯದಲ್ಲಿ ಫಲಿತಾಂಶ, ಸಲಹೆಗಳು ಮತ್ತು ಸಮಾರೋಪ ಈ ರೀತಿ ಒಟ್ಟು ಎಂಟು ಅಧ್ಯಯನಗಳನ್ನು ಆಯ್ಕೆಮಾಡಿಕೊಂಡಿದ್ದೇನೆ.

## ಪ್ರಾಥಮಿಕ ಶಿಕ್ಷಣ ಹರಡುವಿಕೆಯಲ್ಲಿ ನಿರ್ಧಾರಕ ಅಂಶಗಳು

ಶಿಕ್ಷಣವು ಸಮಾಜದಲ್ಲಿ ಪ್ರತಿಯಾಬ್ಬ ವ್ಯಕ್ತಿಗೂ ಅವಶ್ಯಕವಾಗಿದ್ದು ತನ್ನ ವ್ಯಕ್ತಿತ್ವವನ್ನು ಉತ್ತಮ ರೀತಿಯಲ್ಲಿ ರೂಪಿಸಿಕೊಳ್ಳಲು ಮತ್ತು ಉತ್ತಮ ಪ್ರಜೆಯಾಗಿ ಬಾಳಲು ಅತಿ ಮುಖ್ಯವಾಗಿದೆ.(ಓಬಳೇಶ ಘಟ್ಟಿ, ೧೯೯೨, ಪು.ಸಂ.೩) ಆರ್ಥಿಕ ಅಭಿವೃದ್ಧಿ ಸಮಾಜಿಕ ಬದಲಾವಣೆ ದೃಷ್ಟಿಯಿಂದ ಶಿಕ್ಷಣದ ಪಾತ್ರ ತುಂಬಾ ಮಹತ್ವವಾಗಿದೆ. ಅದರಲ್ಲೂ ಪ್ರಾಥಮಿಕ ಶಿಕ್ಷಣ ಪ್ರತಿಯೊಬ್ಬ ಮಗುವಿನ ಅಥವ ವ್ಯಕ್ತಿಯ ವಿಕಾಸಕ್ಕೆ ಅತಿ ಅವ್ಯಶಕವಾಗಿದೆ.(ಟಿ.ಆರ್. ಚಂದ್ರಶೇಖರ್ ೨೦೦೬ ಪು.ಸಂ.೫)

ಅದೇರೀತಿ ಶಿಕ್ಷಣವು ಪ್ರತಿಯೊಂದು ಸಮುದಾಯಕ್ಕೆ ಅವಶ್ಯಕವಾಗಿದ್ದು ಶಿಕ್ಷಣವಿಲ್ಲದೆ ಯಾವುದೇ ಒಂದು ಸಮುದಾಯದ ಪ್ರಗತಿ ಸಾಧಿಸಲಾರದು ಅದೇರೀತಿ ಮುಸ್ಲಿಂ ಸಮುದಾಯ ಪ್ರಗತಿಯನ್ನು ಸಾಧಿಸದಿರಲು ಸಮುದಾಯದ ಅವಿಧ್ಯೆಯೇ ಕಾರಣ ಎನ್ನಬಹುದು. ಪ್ರಾಥಮಿಕ ಶಿಕ್ಷಣವು ಅತಿಅವಶ್ಯಕವಾದದ್ದು ಆದರೆ ಹಲವಾರು ಮುಸ್ಲಿಮರಲ್ಲಿ ಪ್ರಾಥಮಿಕ ಶಿಕ್ಷಣವೇ ಸರಿಯಾಗಿ ಸಿಗುತ್ತಿಲ್ಲ.

ಪ್ರತಿಯೊಂದು ದೇಶದ ಶಿಕ್ಷಣ ವ್ಯವಸ್ಥೆಯಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ಅತ್ಯಂತ ಮಹತ್ವವಿದೆ. ಎಳೆಯ ಮಕ್ಕಳಿಗೆ ಮೂಲಭೂತ ಕೌಶಲ್ಯಗಳನ್ನು ಮತ್ತು ಅರಿವನ್ನು ನೀಡುತ್ತದೆ, ಇದು ಬುನಾದಿ ಶಿಕ್ಷಣವಾಗಿದೆ. ಬುನಾದಿಯೇ ಭದ್ರವಿಲ್ಲದಿದ್ದರೆ ಅದರ ಮೇಲೆ ನಾವು ಕಟ್ಟುವ ಕಟ್ಟಡ ಒಮ್ಮೆಲೆ ಕುಸಿದು ಬೀಳುತ್ತದೆ. ತೃತಿಯ ವಿಶ್ವದ ರಾಷ್ಟ್ರಗಳಲ್ಲಿನ ಸರಕಾರಗಳು ಪ್ರಾಥವಿಕ ಶಿಕ್ಷಣವನ್ನು ಕಡೆಗಣಿಸಿ ಉನ್ನತ ಶಿಕ್ಷಣಕ್ಕೆ ಹೆಚ್ಚಿನ ಬೆಂಬಲ ನೀಡಿದ್ದರಿಂದ ಪ್ರಾಥಮಿಕ ಶಿಕ್ಷಣಕ್ಕೆ ಮಹತ್ವ ತನ್ನಿಂದತಾನೆ ಕಡಿಮೆಯಾಗಿದೆ. ಆದ್ದರಿಂದ ಭಾರತವೂ ಸೇರಿದಂತೆ ಈ ರಾಷ್ಟ್ರಗಳಲ್ಲಿ ಪ್ರಾಥಮಿಕ ಶಿಕ್ಷಣದ ಕ್ಷೇತ್ರದಲ್ಲಿ ಸಮಸ್ಯೆಗಳು ಸವಾಲುಗಳು ಒಂದೆಡೆ ಆದರೆ ಪ್ರಾಥಮಿಕ ಶಿಕ್ಷಣವನ್ನು ಎಲ್ಲರ ಮನೆ ಬಾಗಿಲಿಗೆ ತಲುಪಿಸುವಂತೆ ಮಾಡುವುದು ಸಾಹಸದ ಕೆಲಸ ಇನ್ನೊಂದೆಡೆ ಶಿಕ್ಷಣ ವಿಸ್ತರಣೆಯ ಜೊತೆಗೆ ಗುಣಮಟ್ಟವನ್ನು ಕಾಪಾಡಿಕೊಂಡು ಬರುವ ಮತ್ತು ಉನ್ನತೀಕರಿಸುವ ಭಗೀರಥ ಪ್ರಯತ್ನವಾಗಿದೆ.(ಡಾ.ಮಹಾಬಲೇಶ್ವರ ರಾವ,೧೯೯೯,ಪು.ಸಂ ೬)

ಪ್ರಾಥಮಿಕ ಶಿಕ್ಷಣವು ಹರಡುವಿಕೆಯಲ್ಲಿ ಪ್ರೇರಕವಾದ ಅಂಶಗಳು ಯಾವುವು ಸ್ವತಂತ್ರಪೂರ್ವ ಮತ್ತು ಸ್ವತಂತ್ರನಂತರದಲ್ಲಿ ಪ್ರಾಥಮಿಕ ಶಿಕ್ಷಣ ಸಾರ್ವತ್ರಿಕರಣಕ್ಕೆ ಸಂಬಂಧಿಸಿದಂತೆ ನಡೆಸಿದ ಪ್ರಯತ್ನ ಗಳೇನು ಎಂಬುದನ್ನು ಈ ಮುಂದೆ ವಿವರಿಸಲಾಗಿದೆ.

`ಎಲ್ಲರಿಗೆ ಶಿಕ್ಷಣ` ಎಂಬುದು ಇಂದಿನ ಘೋಷಣೆ ಶಿಕ್ಷಣ ಇಂದು ವ್ಯಕ್ತಿಯ ಮೂಲಭೂತ ಹಕ್ಕಾಗಿದೆ ಜಗತ್ತಿನಾಧ್ಯಂತ ಶಾಲಾವಯಸ್ಸಿನ ಮಕ್ಕಳಿಗಾಗಿ ಶಾಲೆಗಳನ್ನು ತೆರೆದು ಶಿಕ್ಷಣವನ್ನು ಕೊಡಬೇಕಾದ ಹೊಣೆಗಾರಿಕೆ ಇಂದು ಸರಕಾರದ ಮೇಲಿದೆ ಶಿಕ್ಷಣವನ್ನು ತ್ವರಿತಗತಿಯಲ್ಲಿ ಸಾರ್ವತ್ರಿಕರಣ ಗೊಳಿಸದಿದ್ದರೆ ಸಮುದಾಯಿಕ ಅಭಿವೃದ್ಧಿ ಹಾಗು ರಾಷ್ಟ್ರ ನಿರ್ಮಾಣ ಮಾಡುವುದು ಕಷ್ಟ ಎಂಬ ನಂಬಿಕೆಯು ಇಂದು ತುಂಬಾ ಬಲವಾಗಿದೆ.(ಡಾ.ಮಹಾಬಲೇಶ್ವರ ರಾವ,ಪು.ಸಂ ೧೩)

ಭಾರತದಲ್ಲಿ ವಿದೇಶಿಯರ ಆಗಮನದ ಆರಂಭದಲ್ಲಿ ಸಾಕಷ್ಟು ಸುಲಿಗೆಯನ್ನು ಮಾಡಿದ್ದರು. ನಮ್ಮ ಕೆಲವು ಅಧಿಕಾರಶಾಹಿ ಜನರು ವಿದೇಶಿಯರ ಕೈಗೊಂಬೆಗಳಾದರೆ ಕೆಲುವು ಶಿಕ್ಷಿತ ಜನರು ಅವರಲ್ಲಿ ಕಾರಕೂನಿಗಳಾಗಿದ್ದರು. ಇಲ್ಲಿ ರಾಷ್ಟ್ರೀಯ ಭಾವನೆಗಳಾಗಲಿ, ಶೈಕ್ಷಣಿಕ ಸುಧಾರಣೆಗಳಾಗಲಿ ಅವಕಾಶವಿರಲಿಲ್ಲ ನಮ್ಮನ್ನು ತುಂಡು ತುಂಡು ಮಾಡಿ ಆಳುವುದು ವಿದೇಶಿಯರ ಧ್ಯೆಯವಾಗಿತ್ತು. ಹಿಂದುಗಳ ವಿರುದ್ಧ ಮುಸ್ಲಿಂರನ್ನು ಎತ್ತಿ ಕಟ್ಟಿದ ಬ್ರಿಟೀಷರು ಆರಂಭದಲ್ಲಿ ಧಾರ್ಮಿಕ ವೈಷಮ್ಯ ಭಾವನೆಯಿಂದ ದೇಶವನ್ನು ವಿಭಜಿಸಲು ಪ್ರಯತ್ನಿಸಿದರೆ ಕ್ರಮೇಣ ಪ್ರಾದೇಶಿಕ ಭಾವನೆಯಿಂದ ದೇಶವನ್ನು ಹೋಳುಮಾಡಿದರು.

ಬ್ರಿಟಷರ ಕಾಲದಲ್ಲಿ ಅಗಾಧವಾದ ನಷ್ಟವನ್ನು ಅನುಭವಿಸಿದ ಮುಸ್ಲಿಮರು ಯಾವುದೇ ಕ್ಷೇತ್ರದಲ್ಲಿ ಮುಂದುವರಿಯಲು ಸಾಧ್ಯವಿರಲಿಲ್ಲ, ಸ್ವಾತಂತ್ರ್ಯ ಹೋರಾಟದುದ್ದಕ್ಕೂ ಭಾರತೀಯ ಮುಸ್ಲಿಮರು ಅಬ್ದುಲ್ ಕಲಾಮ ಅಜಾದ್ ಮೊದಲಾದ ಧೀಮಂತ ನಾಯಕರ ಹಿರಿತನದಲ್ಲಿ ಕ್ರಿಯಾಶೀಲರಾಗಿ ಭಾಗವಹಿಸಿದ್ದರು. ಮಹತ್ಮಾ ಗಾಂಧೀಜಿಯವರು ಮುಸ್ಲಿಮರ ರಾಷ್ಟ್ರ ಪ್ರಜ್ಞೆಯ ಕುರಿತು ಅಲ್ಲಲ್ಲಿ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದರು. ಹಿಂದೂ ಮುಸ್ಲಿಂ ಎಂಬ ಬೇಧಭಾವವನ್ನು ಮರೆತು ದೇಶಕ್ಕಾಗಿ ಹೋರಾಡಿದ ಭಾರತದ ಜನತೆ ಸ್ವಾತಂತ್ರ್ಯವನ್ನು ಪಡೆಯುವ ಸಂದರ್ಭದಲ್ಲಿ ಅಖಂಡ ಭಾರತ ಖಂಡದ ವಿಭಜನೆಯನ್ನು ಕಾಣುವಂತಹದ್ದಾಗಿದೆ. (ಮಹ್ಮದ್ ಕುಳಾಯಿ,೨೦೦೦,ಪು.ಸಂ. ೮೮-೮೯)

೧೧೯೨ ರಲ್ಲಿ ಘೋರಿ ಮಹ್ಮದರು `ಮುಕ್ತಾಬ`ಮತ್ತು `ಮದರಸಸ್` ಎಂಬ ಎರಡು ಶೈಕ್ಷಣಿಕ ಸಂಸ್ಥೆಗಳನ್ನು ತೆರೆದನು. ಇಲ್ಲಿ ತಮ್ಮ ಮತಿಯರಿಗೆ ಮಾತ್ರ ಅವಕಾಶ ನೀಡಲಾಗಿತ್ತು. `ಮುಕ್ತಾಬ` ಗಳಲ್ಲಿ ಪ್ರಾಥಮಿಕ ಶಿಕ್ಷಣ ಕೊಡುವ ಕೇಂದ್ರವಾಗಿತ್ತು. ಇದರಲ್ಲಿ ಧಾರ್ಮಿಕ ಗ್ರಂಥವಾದ ಕುರಾನನ್ನು ಭೋದಿಸಿ ಅದರಲ್ಲಿ ಮೂಲಭೂತವಾದ ತತ್ವಗಳನ್ನು ತಿಳಿಸುತ್ತಿದ್ದರು. ಇದು ಮುಸೀದಿಯೊಂದಿಗೆ ಸೇರ್ಪಡೆಯಾಗಿತ್ತು, ಇಲ್ಲಿ ಅರೇಬಿಕ ಮತ್ತು ಪರ್ಶಿಯನ ಭಾಷೆಯಿಂದ ಓದು ಬರಹದೊಂದಿಗೆ ಗಣಿತ

ಮುಂತಾದವುಗಳನ್ನು ಕಲಿಸಲಾಗುತ್ತಿತ್ತು. ಆದರೆ(ಓಬಳೇಶ ಘಟ್ಟ,೧೯೮೨,ಪು.ಸಂ.೮೧-೮೨) 'ಮದರಸಸ್' ಉನ್ನತ ಶಿಕ್ಷಣಕ್ಕೆ ಹೆಚ್ಚು ಮೀಸಲಾಗಿತ್ತು.

೧೯ ನೇಯ ಶತಮಾನದಲ್ಲಿ ಬ್ರಿಟಿಷರು ವ್ಯಾಪಾರಕ್ಕೆ ಬಂದರು. ಎಲ್ಲಾ ಧರ್ಮದವರನ್ನು ಹತ್ತಿಕ್ಕಿ ಭಾರತದಲ್ಲಿ ಪ್ರಜಾಪ್ರಭುತ್ವ ಸ್ಥಾಪಿಸಿದ ನಂತರ ವ್ಯಾಪಾರದೊಂದಿಗೆ ಭಾರತ ಶಿಕ್ಷಣ ವನ್ನು ಪ್ರೋತ್ಸಾಹಿಸಿದರು. ಇಂಗ್ಲೀಷ್ ಮೂಲಕವೇ ಶಿಕ್ಷಣವನ್ನು ನೀಡಿದರು(ಡಾ.ಮಹಾಬಲೇಶ್ವರರಾವ, ಜೆ.ಪಿ.ನಾಯಕ್(ಅನು) ೧೯೯೦, ಪು.ಸಂ.೧೬) ಇವರು ಶಾಲಾ ಶಿಕ್ಷಣ ವ್ಯವಸ್ಥೆಯನ್ನು ಜಾರಿಗೆ ತರಲು ಪ್ರಯತ್ನ, ಮಾಡಿದಾಗ ಇಲ್ಲಿ ನೂರಾರು ದೇಶಿಯ ಶಾಲೆಗಳು ಅಸ್ತಿತ್ವದಲ್ಲಿ ಇದ್ದವು 'ಪಾಠಶಾಲೆ'ಗಳು ಮತ್ತು 'ಮದರಸಾ'ಗಳು 'ಮುಕ್ತಾಬ್' ಶೈಕ್ಷಣಿಕ ಕೇಂದ್ರಗಳು ಇದ್ದವು. ಪಂಡಿತರು, ವೈದ್ಯರು ಹಾಗೂ ಮೌಲ್ವಿಗಳು ರೂಪಿಸುವುದೇ ಈ ಸಂಪ್ರದಾಯಿಕ ಧಾರ್ಮಿಕ ಶಿಕ್ಷಣ ಸಂಸ್ಥೆಗಳ ಉದ್ದೇಶವಾಗಿತ್ತು. ಮೇಲುಜಾತಿಯ ಜನರಿಗೆ ಮಾತ್ರ ಇಲ್ಲಿ ಅವಕಾಶವಿತ್ತು, ಆದರೆ ಕೆಳಜಾತಿ ಮತ್ತು ಹೆಣ್ಣು ಮಕ್ಕಳಿಗೆ ಇಲ್ಲಿ ಅವಕಾಶವಿರಲ್ಲಿ. ಬ್ರಿಟಿಷರ ಕಾಲದಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ಹಲವಾರು ಆಧ್ಯತೆ ನೀಡಿ ಸಮೀಕ್ಷೆಗಳು ನೆಡೆಸಿದರು. ಭಾರತದಲ್ಲಿ ಆಧುನಿಕ ಶಿಕ್ಷಣವು ೧೮೧೩ರ ಕಾಯ್ದೆಯಿಂದಾಗಿ ಉಗಮಿಸಿತು. ಈ ಕಾಯ್ದೆ ಪ್ರಕಾರ ಭಾರತದ ಜನತೆಗೆ ಔಪಚಾರಿಕ ಶಿಕ್ಷಣ ನೀಡುವ ಜವಾಬ್ದಾರಿಯನ್ನು ಈಸ್ಟ ಇಂಡಿಯಾ ಕಂಪನಿಯು ವಹಿಸಿಕೊಂಡಿತು. (ಡಾ.ಮಹಾಬಲೇಶ್ವರರಾವ, ೧೯೯೯, ಪು.ಸಂ.೧೩-೧೪).

ಸರ್ ಥಾಮಸ್ ಮನ್ರೋ ಮದ್ರಾಸ್ ಸರ್ಕಾರದ ಗೌರ್‍ನರ್ ಆದಾಗ ಪ್ರಾಥಮಿಕ ಶಿಕ್ಷಣ ವೆಂಬುದು ಬಹಳ ಉಪಯುಕ್ತವೆಂದು ಶಿಕ್ಷಣಕ್ಕೆ ಹೆಚ್ಚು ಒತ್ತುಕೊಟ್ಟು ಮದ್ರಾಸ್ ಕ್ಷೇತ್ರದಲ್ಲಿ ಶಿಕ್ಷಣದ ಪರಿಸ್ಥಿತಿಯನ್ನು ಸಮೀಕ್ಷೆಮಾಡಿ ಇದಕ್ಕೆ ಸಂಬಂಧಪಟ್ಟ ಕೆಲವು ವರದಿಗಳನ್ನು ತಯಾರು ಮಾಡಿದರು.(ಓಬಳೇಶ ಘಟ್ಟ, ೧೯೯೨,ಪು.ಸಂ.೮೯) ಲಾರ್ಡ ಮೆಕಾಲೇ ದೇಶಿಯ ಮತ್ತು ಪೌರ್ವಾತ್ಯ ಶಿಕ್ಷಣ ಕ್ರಮವನ್ನು ಖಂಡಿಸಿದ್ದು ಮಾತ್ರವಲ್ಲದೇ ಪೌರ್ವಾತ್ಯ ಶಿಕ್ಷಣ ಹಾಗೂ ಆಂಗ್ಲ ಶಿಕ್ಷಣ ಎಂಬ ದ್ವಂದ್ವಗಳಿಗೆ ಅವಕಾಶ ಕಲ್ಪಿಸಿದನು. ಅನೇಕರು ಇವನ ಆದೇಶಕ್ಕೆ ಒಪ್ಪಿಕೊಂಡರು. (ಡಾ.ಮಹಾಬಳೇಶ್ವರರಾವ, ೧೯೯೯,ಪು.ಸಂ.೧೫).

## ಬ್ರಿಟೀಷರ ಕಾಲದಲ್ಲಿ ಶಿಕ್ಷಣದ ಪ್ರಗತಿಗಾಗಿ ವರದಿಯನ್ನು ಜಾರಿಗೊಳಿಸಲಾಯಿತು.

### ಉಡ್ಸ್‌ನ ವರದಿ

೧೮೫೪ ರಲ್ಲಿ ವುಡಸ್ ಪರಿಪತ್ರ ಪ್ರಕಟಿತವಾಯಿತು. ಇದು ಭಾರತದಲ್ಲಿ ಶಿಕ್ಷಣ ಪ್ರಸಾರಕ್ಕೆ ವಿಶೇಷ ಆಧ್ಯತೆ ನೀಡಿತು. ಈ ಸಮಿತಿಯ ಸಂಸ್ಥಾ ನಿರ್ದೇಶಕರಾದವರು ಉಡ್ ಇವರನ್ನು ಸಂಸ್ಥೆಯ ಅಧ್ಯಕ್ಷರನ್ನಾಗಿ

ಮಾಡಿ ಇವರ ಹೆಸರು ಇಟ್ಟು ಉಡ್ಸ್‌ನ ಶೈಕ್ಷಣಿಕ ವರದಿ ಎಂದು ಘೋಷಿಸಲಾಯಿತು. ಭಾರತದ ಶೈಕ್ಷಣಿಕ ವ್ಯವಸ್ಥೆಯಲ್ಲಿ ವುಡನ್ ವರದಿ ಹಲವಾರು ಶಿಫಾರಸ್ಸುಗಳು ಮಾಡಿತು. ಅವುಗಳು ಈ ಕೆಳಗಿನಂತಿವೆ.

**ಶೈಕ್ಷಣಿಕ ಜವಾಬ್ದಾರಿಯನ್ನು ಜಾರಿಗೆ ತರುವುದು**

ಶೈಕ್ಷಣಿಕ ಪ್ರಗತಿಯುನ್ನು ಮಾಡುವುದರಲ್ಲಿ ಕಾಲ ವಿಳಂಬ ಮಾಡದೇ ಕಡ್ಡಾಯವಾಗಿ ಮತ್ತು ಪ್ರತಿನಿತ್ಯ ಶಿಕ್ಷಣ ನೀಡುವ ಸಂಸ್ಥೆಗಳನ್ನು ತೆರದು, ಭಾರತದಲ್ಲಿ ಅಜ್ಞಾನವನ್ನು ತೊಡೆದು ಹಾಕಬೇಕೆಂದು ಜವಾಬ್ದಾರಿಯುತ ಶಿಕ್ಷಣ ಜಾರಿಗೆ ತರಬೇಕೆಂದು ಹಾಗೂ ಅಂಗೀಕಾರ ಮಾಡಬೇಕೆಂದು ಒತ್ತಾಯಿಸಲಾಯಿತು.

ಅದೇರೀತಿ ಮುಸ್ಲಿಂ ಶಿಕ್ಷಣ ಅಭಿವೃದ್ಧಿಪಡಿಸಬೇಕೆಂದು 'ಉಡ್ಸ್'ನು ಸಲಹೆ ಮಾಡಿದನು. ಮುಸ್ಲಿಂ ಜನಾಂಗ ಶಿಕ್ಷಣದಲ್ಲಿ ಅತಿ ಹಿಂದುಳಿದವರಾಗಿದ್ದಾರೆ ಆದ್ದರಿಂದ ಅವರೂ ಶಿಕ್ಷಣ ಲಾಭ ಪಡೆದುಕೊಳ್ಳುವಂತೆ ಮತ್ತು ಆ ಸಾಮರ್ಥ್ಯ ಬೆಳೆಸಿಕೊಳ್ಳುವಂತೆ ಮಾಡಬೇಕೆಂದು ಶಿಫಾರಸ್ಸು ಮಾಡಲಾಯಿತು. (ಓಬಳೇಶ ಘಟ್ಟಿ, ೧೯೯೨,ಪು.ಸಂ.೯೨-೯೩)

ಇಂಗ್ಲೀಷ್ ಭಾಷೆ ಹಾಗೂ ದೇಶಿಯ ಭಾಷಾ ಮಾಧ್ಯಮದ ತರಗತಿಗಳಿರಬೇಕು ಎಂದು ಉಡ್ಸ್‌ನ ಪರಿಪತ್ರದಲ್ಲಿ ಶಿಫಾರಸ್ಸು ಮಾಡಲಾಯಿತು. ೧೮೫೫ರಲ್ಲಿ ಶಿಕ್ಷಣ ಇಲಾಖೆಗಳನ್ನು ಆರಂಭಿಸಲಾಯಿತು. ಗುಣಮಟ್ಟ, ದಕ್ಷತೆ ಮುಂತಾದ ಕಲ್ಪನೆಗಳಿಲ್ಲದರಿಂದ ದೇಶಿಯ ಶಾಲೆಗಳು ಮಾಯವಾದವು. (ಡಾ.ಮಹಾಬಳೇಶ್ವರರಾವ, ೧೯೯೯, ಪು.ಸಂ. ೧೫)

**ಹಂಟರ ಆಯೋಗ**

ಹಂಟರ ಆಯೋಗವು ಭಾರತದ ಪ್ರಥಮ ಆಯೋಗವಾಗಿದೆ. ಬ್ರಿಟೀಷ ಸರಕಾರ ೧೮೮೨ರಲ್ಲಿ ನೇಮಕ ಮಾಡಿತು. ಈ ಆಯೋಗವನ್ನು ಭಾರತದ ಗವರನರ್ ಜನರಲ ಲಾರ್ಡರಿಪ್ಪನನ್ನು ವಿಲಿಯಂ ಹಂಟರ್‌ನ ಅಧ್ಯಕ್ಷತೆಯಲ್ಲಿ ರಚಿಸಿದರಿಂದ ಹಂಟರ ಆಯೋಗ ಎಂದೇ ನಾಮಕರಣ ಮಾಡಲಾಯಿತು. (ಓಬಳೇಶ ಘಟ್ಟಿ , ೧೯೯೨,ಪು.ಸಂ.೯೮)

ಈ ಆಯೋಗವು ಪ್ರಾಥಮಿಕ ಶಿಕ್ಷಣಕ್ಕೆ ಪ್ರಾಧನ್ಯತೆ ಕೊಟ್ಟು ಪ್ರಾಥಮಿಕ ಶಿಕ್ಷಣ ದೇಶಾದ್ಯಂತ ಹರಡುವಂತೆ ಕ್ರಮುಗಳನ್ನು ಕೈಗೊಂಡಿತು. ಶಿಕ್ಷಣದ ಸಾರ್ವತ್ರಿಕರಣಕ್ಕೆ ಸಂಬಂಧಿಸಿದಂತೆ ಈ ಆಯೋಗವು ಹಲವಾರು ಕ್ರಮುಗಳನ್ನು ಶಿಫಾರಸ್ಸು ಮಾಡಿತು. ಆದರೆ ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯಗೊಳಿಸುವ ಶಿಫಾರಸ್ಸು ಅದು ಮಾಡಲಿಲ್ಲ, ಪ್ರಾಥಮಿಕ ಶಾಲೆಗಳು ಜನಗಳ ಪರಿಸ್ಥಿತಿಗೆ ಹತ್ತಿರವಾಗಿದ್ದ ಆಯಾ

ರಾಜ್ಯಗಳ ಸ್ವಯತ್ತತೆಗೆ ಅವುಗಳನ್ನು ವಹಿಸಿಕೊಟ್ಟು ಎಲ್ಲಾ ಮಕ್ಕಳಿಗೂ ಪ್ರಾಥಮಿಕ ಶಿಕ್ಷಣಕ್ಕೆ ಅವಕಾಶ ಕಲ್ಪಿಸಿಕೊಟ್ಟು ಶಾಲೆಗಳನ್ನು ಉತ್ತಮಪಡಿಸಿ ಹೆಚ್ಚು ಹೆಚ್ಚು ದೇಶಾದ್ಯಂತ ಹರಡುವಂತೆ ಮಾಡುವುದು ಈ ಆಯೋಗದ ಶಿಫಾರಸಾಗಿತ್ತು. (ಡಾ.ಮಹಾಬಳೇಶ್ವರರಾವ, ೧೯೯೯, ಪು.ಸಂ.೧೬).

ಅದೇರೀತಿ ಈ ಆಯೋಗವು ಮುಸ್ಲಿಂ ಶಿಕ್ಷಣಕ್ಕೆ ವಿಶೇಷ ನಿಧಿಯನ್ನು ಮಾಡಬೇಕು ಮುಸ್ಲಿಂ ಜನಾಂಗ ಹೆಚ್ಚಿರುವ ಕೆಲವು ಸ್ಥಳಗಳಲ್ಲಿ ಭೋಧನೆಯು ಉರ್ದು ಮತ್ತು ಪರ್ಷಿಯನ್ ಭಾಷೆಯಲ್ಲಿ ನಡೆಯಬೇಕು ಮತ್ತು ಇದನ್ನು ಪ್ರಾಥಮಿಕ ಹಂತದಲ್ಲೆ ಜಾರಿಗೆ ತರಬೇಕು. ಮುಸ್ಲಿಂ ವಿದ್ಯಾರ್ಥಿಗಳಲ್ಲಿ ಬಡವಿದ್ಯಾರ್ಥಿಗಳನ್ನು ವಿದ್ಯಾರ್ಥಿ ವೇತನವನ್ನು ಒದಗಿಸುವಂತೆ ಶಿಫಾರಸ್ಸು ಮಾಡಿತು. (ಓಬಳೇಶ ಘಟ್ಟ, ೧೯೯೨,ಪು.ಸಂ.೯೮)

ಪಾಶ್ಚಾತ್ಯ ವಿದ್ಯಾಭ್ಯಾಸದ ಪ್ರಭಾವದಿಂದಾಗಿ ಇಪ್ಪತ್ತನೇ ಶತಮಾನದ ಆರಂಭದಲ್ಲಿ 'ಶಿಕ್ಷಣ ಒದಗಿಸಿ' ಈ ಬಗೆಯ ಆಂಧೋಲನಗಳು ಹೆಚ್ಚು ತೀವ್ರಗೊಂಡವು. ಇಂಗ್ಲೆಂಡಿನ ಪಾರ್ಲಿಮೆಂಟನಲ್ಲಿ ೧೮೭೦ರಲ್ಲಿ ಕಡ್ಡಾಯ ಪ್ರಾಥಮಿಕ ಶಿಕ್ಷಣದ ಮಸೂದೆ, ಅಂಗೀಕೃತವಾಯಿತು. ೧೮೭೦ ರಿಂದ ೧೮೮೮ರ ಅವಧಿಯಲ್ಲಿ ಇಂಗ್ಲೆಂಡಿನ ವಿವಿಧ ಭಾಗಗಳಲ್ಲಿ ಕಡ್ಡಾಯ ಪ್ರಾಥಮಿಕ ಶಿಕ್ಷಣದ ಕಾಯ್ದೆಗಳು ಜಾರಿಗೆ ಬಂದವು. ೧೮೮೫ರಲ್ಲಿ ಭಾರತದ ರಾಷ್ಟ್ರೀಯ ಕಾಂಗ್ರೆಸ ಅಸ್ತಿತ್ವಕ್ಕೆ ಬಂದು ಭಾರತೀಯರಿಗೆ ರಾಷ್ಟ್ರೀಯ ಭಾವನೆಗಳಿಗೆ ವಿಶೇಷವಾದ ಚಾಲನೆ ನೀಡಿತು. ಭಾರತೀಯ ನೇತರರಾದ ದಾದಾಬಾಯಿ ನವರೋಜಿಯವರು ಗೋಪಾಲ ಕೃಷ್ಣ ಗೋಖಲೆಯವರೆ ಎಲ್ಲಾ ಮಕ್ಕಳಿಗೆ ೪ ವರ್ಷಗಳ ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣ ನೀಡುವ ಜವಬ್ದಾರಿ ಕೇಂದ್ರಸರ್ಕಾರವೇ ವಹಿಸಿಕೊಡಬೇಕೆಂದು ಪಟ್ಟು ಹಿಡಿದರು. (ಡಾ.ಮಹಾಬಳೇಶ್ವರರಾವ,೧೯೯೯, ಪು.ಸಂ.೧೬-೧೭) ಆದರೆ ಗೋಖಲೆಯವರ ಪ್ರಯತ್ನಗಳು ದೂರಗಾಮಿ ಪರಿಣಾಮಗಳಿಗೆ ಕಾರಣವಾದವು. ಅವರ ಮಸೂದೆ ತಿರಸ್ಕೃತವಾಯಿತು. ೧೯೧೮ರಿಂದ ೧೯೩೦ರ ನಡುವೆ ಎಲ್ಲಾ ಪ್ರಾಂತಿಯ ಸರ್ಕಾರಗಳು ಪ್ರಾಥಮಿಕ ಶಿಕ್ಷಣ ಪ್ರಸಾರ ಮಾಡುವದರಲ್ಲಿ ಒಂದು ಹೆಜ್ಜೆ ಮುಂದು ವರಿಸಿಕೊಂಡು ಹೋಯಿತು. (ಡಾ.ಮಹಾಬಳೇಶ್ವರರಾವ,೧೯೯೯, ಪು.ಸಂ.೧೯).

### ಹಾರ್ಟಗ್ ಆಯೋಗ

ಬ್ರಿಟಿಷ ಸರ್ಕಾರವು ನವೆಂಬರ ೮, ೧೯೨೩ ರಲ್ಲಿ ಭಾರತದ ಕಾಯ್ದೆ ಪ್ರಕಾರ ಸೈಮನ್ ಆಯೋಗವನ್ನು ನೇಮಿಸಲಾಯಿತು. ಈ ಆಯೋಗದ ಜೊತೆಗೆ ಢಕ್ಕಾ ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿ ಸೇವೆಸಲ್ಲಿಸಿದ್ದ 'ಹಾರ್ಟಗ್' ಎಂಬುವರನ್ನು ಆಯೋಗದ ಅಧ್ಯಕ್ಷರನ್ನಾಗಿ

ಮಾಡಲಾಯಿತು. ಇವರು ಅಂದಿನ ಶಿಕ್ಷಣ ಪರಿಸ್ಥಿತಿಯನ್ನು ದೀರ್ಘವಾಗಿ ಅಧ್ಯಯನ ಮಾಡಿ ವಿಷಯಗಳನ್ನು ಗ್ರಹಿಸಿ ತಮ್ಮ ಸದಸ್ಯರೊಂದಿಗೆ ಒಂದು (ಓಬಳೇಶ ಘಟ್ಟ , ೧೯೯೨,ಪು.ಸಂ.೯೯) ಮಹತ್ವಪೂರ್ಣವಾದ ವರದಿಯನ್ನು ಸೈಮನ್ ಆಯೋಗಕ್ಕೆ ೧೯೨೯ರ ಸೆಪ್ಟಂಬರ್‌ನಲ್ಲಿ ಸಲ್ಲಿಸಿದರು. ಈ ವರದಿಯ ಕಾರ್ಯಾಧ್ಯಕ್ಷರು ಹಾರ್ಟಗ್ ಆದ್ದರಿಂದ ಈ ವರದಿಗೆ `ಹಾರ್ಟಗ್ ಆಯೋಗ` ಎಂದು ನಾಮಕರಣ ಮಾಡಲಾಯಿತು. ಈ ಆಯೋಗವು ಹಲವಾರು ಶಿಫಾರಸ್ಸು ಮಾಡಿತು. ಬಾಲಕಿಯರಿಗೆ ಪ್ರಾಥಮಿಕ ಶಿಕ್ಷಣವು ಕಡ್ಡಾಯ ಮತ್ತು ಸಾರ್ವತ್ರಿಕರಣ ಗೊಳಿಸಬೇಕು. ಮುಸ್ಲಿಂ ಜನಾಂಗ ಶಿಕ್ಷಣದಲ್ಲಿ ಬಹಳ ಹಿಂದುಳಿದಿರುವದರಿಂದ ಅವರಿಗೆ ಆದಷ್ಟು ಕಡ್ಡಾಯ ಶಿಕ್ಷಣ ನೀಡಬೇಕು. ಪ್ರಾಥಮಿಕ ಶಾಲಾ ಶಿಕ್ಷಣವನ್ನು ಕಾಲ ಕಾಲಕ್ಕೆ ಅದರ ಗುಣಮಟ್ಟವನ್ನು ಬದಲಾವಣೆ ಮಾಡುವ ಶಿಫಾರಸ್ಸು ಮಾಡಿತು. (ಓಬಳೇಶ ಘಟ್ಟ, ೧೯೯೨, ಪು.ಸಂ.೧೦೧).

೧೯೩೭ರಲ್ಲಿ ಪ್ರಾಥಮಿಕ ಶಿಕ್ಷಣವನ್ನು ಪ್ರಾಂತ್ಯಗಳಿಗೆ ಬ್ರಿಟಿಷ್ ಸರಕಾರ ವಹಿಸಿಕೊಟ್ಟಿತು. ಈ ನಡುವೆ ಮಹತ್ಮಾ ಗಾಂಧೀಜಿಯವರು ಸೇವಗ್ರಾಮದಲ್ಲಿ ತಮ್ಮ ಮೂಲ ಶಿಕ್ಷಣದ ಪರಿಕಲ್ಪನೆಯನ್ನು ಸಕಾರಗೊಳಿಸಲು ಪ್ರಯತ್ನಿಸುತ್ತಿದ್ದರು. ಕೈಕಸುಬು ಆಧಾರಿತ ಪ್ರಾಥಮಿಕ ಶಿಕ್ಷಣವನ್ನು ಮಕ್ಕಳಿಗೆ ಒದಗಿ ಸಲು ಪ್ರಯತ್ನಿಸಿ ಸೇವಗ್ರಾಮದಲ್ಲಿ ಕಂಡುಕೊಂಡರು. ಶಿಕ್ಷಣವನ್ನು ಇಂಗ್ಲೀಷ್ ಭಾಷೆಯ ಬದಲಾಗಿ ಪ್ರಾದೇಶಿಕ ಭಾಷಾ ಮಾಧ್ಯಮದಲ್ಲಿ ಶಿಕ್ಷಣ ನೀಡಬೇಕು ಎಂದು ಗಾಂಧೀಜಿಯವರು ಮಂಡಿಸಿದರು.

**ಸಾರ್ಜಂಟ ವರದಿ**

೧೯೪೪ರಲ್ಲಿ ಸರ್ ಜಾನ್ ಸಾರ್ಜೆಂಟರ ನೇತೃತ್ವದಲ್ಲಿ ಭಾರತದ ಶಿಕ್ಷಣ ಅಭಿವೃದ್ಧಿಗೆ ವರದಿಯನ್ನು ಸಲ್ಲಿಸಲಾಯಿತು. ಪ್ರಾಥಮಿಕ ಶಿಕ್ಷಣದಿಂದ ವಿಶ್ವ-ವಿಧ್ಯಾನಿಲಯದವರೆಗಿನ ಸರಿಯಾದ ರೀತಿಯಲ್ಲಿ ಮನದಟ್ಟು ಮಾಡಿಕೊಂಡು ಸಂಗ್ರಹಿಸುವದರಲ್ಲಿ ಮೊಟ್ಟಮೊದಲನೆ ವರದಿ ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ಈ ವರದಿಯು ಹಲವಾರು ಶಿಫಾರಸ್ಸು ಮಾಡಿತು. ೬ ರಿಂದ ೧೪ ವಯಸ್ಸಿನ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣ ಕಡ್ಡಾಯವಾಗಿ ಮತ್ತು ಉಚಿತವಾಗಿ ಕೊಡುವಂತೆ ಅವಕಾಶ ಮಾಡಿ ಕೊಡಬೇಕೆಂದು ಮೂಲಶಿಕ್ಷಣವನ್ನು ಎರಡು ಭಾಗಗಳಾಗಿ ಒಂದು ಕಿರಿಯ ಪ್ರಾಥಮಿಕ ಶಿಕ್ಷಣ, ಎರಡು ಹಿರಿಯ ಪ್ರಾಥಮಿಕ ಶಿಕ್ಷಣ ಎಂದು ಎರಡು ವಿಭಾಗಗಳಾಗಿ ವಿಭಾಗಿಸಿದರು. ಅಲ್ಲದೆ ಮೂಲ ಶಿಕ್ಷಣವನ್ನು ರಾಷ್ಟ್ರೀಯ ಕಾರ್ಯಕ್ರಮಗಳನ್ನಾಗಿ ಅನುಮೋದಿಸಿತು. (ಡಾ.ಮಹಾಬಳೇಶ್ವರರಾವ, ೧೯೯೯, ಪು.ಸಂ.೨೦-೨೧) ೧೯೬೦

ರ ಹೊತ್ತಿಗೆ ಗುರಿಸಾಧಿಸಬೇಕೆಂದು ಶಿಫಾರಸ್ಸು ಮಾಡಿತು. ಈ ಶಿಫಾರಸ್ಸನ್ನು ಸ್ವೀಕರಿಸಿ ೧೯೫೦ ರಲ್ಲಿ ಸಂವಿಧಾನದ ನಿರ್ದೇಶಕ ಸೂತ್ರಗಳಲ್ಲಿ ೪೫ ನೇ ವಿಧಿಯಾಗಿ ಅಳವಡಿಸಲಾಯಿತು.

## ಸ್ವತಂತ್ರ ಭಾರತದಲ್ಲಿ ಶಿಕ್ಷಣ

## ಸಂವಿಧಾನ ಮತ್ತು ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣ

ಭಾರತದ ಸಂವಿಧಾನದ ನಾಲ್ಕನೆಯ ಪರಿಚ್ಛೇದದಲ್ಲಿ ನಿರ್ದೇಶಕ ಸೂತ್ರಗಳಲ್ಲಿ ಬರುವ ೪೫ ನೇ ವಿಧಿಯಲ್ಲಿ ಈ ರೀತಿಇದೆ. ಸಂವಿಧಾನವು ಆಚರಣೆಗೆ ಬಂದ ಹತ್ತು ವರ್ಷಗಳ ಅವಧಿಯೊಳಗೆ ಸರಕಾರವು ೧೪ ವರ್ಷ ವಯೋಮಾನದವರೆಗಿನ ಎಲ್ಲಾ ಮಕ್ಕಳಿಗೆ ಉಚಿತ ಹಾಗು ಕಡ್ಡಾಯ ಶಿಕ್ಷಣವನ್ನು ಒದಗಿಸುವ ಉದ್ದೇಶ ಹೊಂದಿತ್ತು. ಆದರೆ ಈ ಉದ್ದೇಶ ಇಲ್ಲಿಯವರೆಗಾದರೂ ಈಡೇರಲಿಲ್ಲ.

ಸಂವಿಧಾನದ ೨೯ ನೇ ಯ ವಿಧಿಯು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳಿಗೆ ಅಲ್ಪ ಸಂಖ್ಯಾತರ ಕೋಮುಗಳಿಗೆ ಸೇರದ ಮಕ್ಕಳಿಗೆ ಶಿಕ್ಷಣವಕಾಶ ಒದಗಬೇಕು ಎಂದು ಒತ್ತಿ ಹೇಳಿದೆ. ೩೦ನೇಯ ವಿಧಿ ಅಲ್ಪಾಸಂಖ್ಯಾತರ ಶೈಕ್ಷಣಿಕ ಸಂಸ್ಥೆಗಳನ್ನು ಸ್ಥಾಪಿಸುವ ಮತ್ತು ನೀರ್ವಹಿಸುವ ಹಕ್ಕನ್ನು ಒದಗಿಸಬೇಕು ಎಂದು ಹೇಳುತ್ತದೆ. . (ಡಾ.ಮಹಾಬಳೇಶ್ವರರಾವ,೧೯೯೯, ಪು.ಸಂ.೨೨)

ಸಂವಿಧಾನದ ೪೫ ನೇ ವಿಧಿ ಉಚಿತ ಹಾಗೂ ಕಡ್ಡಾಯ ಶಿಕ್ಷಣ ನೀಡಬೇಕೆಂದು ಸಾರಿ, ಕಡ್ಡಾಯ ಶಿಕ್ಷಣದ ಮಸೂದೆಯು ಜಾರಿಗೆ ತರಲಾಗಿತ್ತು. ಆದರೆ ನಾನಾ ಕಾರಣಗಳಿಂದ ಈ ಮಸೂದೆಗಳು ನಿಷ್ಕ್ರೀಯವಾಗಿ ಇತ್ತೀಚಿನ ವರ್ಷಗಳಲ್ಲಿ ರಾಷ್ಟ್ರೀಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಮಂಡಳಿಯು ಕಡ್ಡಾಯ ಎಂಬ ಪರಿಕಲ್ಪನೆಯನ್ನು ಕೈಬಿಟ್ಟು 'ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣ' ಎಂಬ ಘೋಷಣೆಯನ್ನು ಹೊರಡಿಸಿತು. ಭಾರತದಲ್ಲಿ ಶಿಕ್ಷಣವನ್ನು ಸಾರ್ವತ್ರೀಕರಣ ಗೋಳಿಸಬೇಕಾದರೆ ಬಾಲಕಾರ್ಮಿಕ ನಿಷೇಧ ಕಾನೂನನ್ನು ಕಟ್ಟುನಿಟ್ಟಾಗಿ ಜಾರಿಗೆ ತರಬೇಕು. ಜನರ ಬಡತನವನ್ನು ಹೋಗಲಾಡಿಸಿ ಅವರು ಕೊಳ್ಳುವ ಶಕ್ತಿಯನ್ನು ಹೆಚ್ಚಿಸಬೇಕು. ಅಜ್ಞಾನ ಹಾಗೂ ಅನಕ್ಷರತೆಯನ್ನು ನಿವಾರಿಸಬೇಕು ಶಿಕ್ಷಣದ ಬಗೆಗಿನ ಬೇಡಿಕೆಯನ್ನು ಹೆಚ್ಚಿಸಬೇಕು. ದೇಶದ ಎಲ್ಲಾ ಹಳ್ಳಿಗಳಲ್ಲಿ ಮಹಿಳಾ ಶಿಕ್ಷಕರು ಹಾಗೂ ಸೌಲಭ್ಯಗಳಿರುವಂತೆ ನೋಡಿಕೊಳ್ಳಬೇಕು. ಶಿಕ್ಷಣದ ಬಗೆಗಿನ ಬೇಡಿಕೆಯನ್ನು ಹೆಚ್ಚಿಸಬೇಕು. ದೇಶದ ಎಲ್ಲಾ ಹಳ್ಳಿಗಳಲ್ಲಿ ಶಾಲೆಗಳು, ಶಾಲೆಗಳಲ್ಲಿ ಶಿಕ್ಷಕರು ಹಾಗೂ ಸೌಲಭ್ಯಗಳಿರುವಂತೆ ನೋಡಿಕೊಳ್ಳಬೇಕು. (ಡಾ.ಮಹಾಬಳೇಶ್ವರರಾವ,೧೯೯೯, ಪು.ಸಂ.೨೨-೨೩)

ಅಂದಾಗ ಮಾತ್ರ ಸ್ತ್ರೀ-ಪುರುಷರಿಬ್ಬರಿಗೂ ಬಡವ-ಶ್ರೀಮಂತರೆಲ್ಲರೂ ಮತ್ತು ಎಲ್ಲಾಜಾತಿಯವರೂ ಶಿಕ್ಷಣ ಪಡೆದಾಗ, ದೇಶದ ಅಭಿವೃದ್ಧಿ ಸಾಧ್ಯವಾಗುವುದು.

೧೯೫೦ ರಿಂದ ಹತ್ತು ವರ್ಷಗಳೊಳಗಾಗಿ ಪ್ರಾಥಮಿಕ ಶಿಕ್ಷಣವನ್ನು ಈ ದೇಶದ ೧೪ ವಯೋಮಾನದ ಎಲ್ಲಾ ಮಕ್ಕಳಿಗೆ ಒದಗಿಸಲಾಗುವುದು ಎಂದು ಘೋಷಿಸಲಾಗಿದೆ. ೧೯೬೦ ರಲ್ಲಿ ಗುರಿ ಸಾಧನೆ ಯಾಗಬೇಕಾಗಿದ್ದು, ಗುರಿ ಸಾಧನೆಯಾಗದೆ ೧೯೬೫ಕ್ಕೆ ಮುಂದೂಡಲಾಯಿತು. ಅಲ್ಲಿಂದ ಮುಂದೆ ೧೯೭೫, ೧೯೮೪, ೧೯೮೬, ೧೯೯೦, ೧೯೯೫ ರವರೆಗೆ ಮುಂದೂಡುತ್ತಲೇ ಬಂದಿದೆ. ಕ್ರಿ. ಶ ೨೦೦೦ದ ಹೊತ್ತಿಗೆ ಎಲ್ಲರಿಗೂ ಶಿಕ್ಷಣ ಎಂಬ ಘೋಷಣೆ ಮೊಳಗಿತು. ಸಂಯುಕ್ತ ರಂಗದ ಸರಕಾರ ಆಡಳಿತಕ್ಕೆ ಬಂದಮೇಲೆ ಕ್ರಿ. ಶ. ೨೦೦೫ ಹೊತ್ತಿಗೆ ಪ್ರಾಥಮಿಕ ಶಿಕ್ಷಣ ಎಂಬ ಘೋಷಣೆ ಅಧಿಕೃತವಾಗಿ ಪ್ರಕಟವಾಯಿತು. ಶ್ರೀ ಅರುಣಾ ಮೇಹೆತಾ ರವರು ಕ್ರಿ. ಶ ೨೦೦೭ ರ ಹೊತ್ತಿಗೆ ಈ ಗುರಿ ಸಾಧನೆ ಆಗಬಹುದು ಎಂಬ ಆಭಿಪ್ರಾಯವನ್ನು ವ್ಯಕ್ತಪಡಿಸಿದರು. (ಡಾ.ಮಹಾಬಳೇಶ್ವರರಾವ,೧೯೯೯, ಪು.ಸಂ.೨೪).

ಪಂಚವಾರ್ಷಿಕ ಯೋಜನೆಗಳ ಪ್ರಯತ್ನಗಳು ಮತ್ತು ವೆಚ್ಚಗಳನ್ನು ವಿಶ್ಲೇಷಿಸುವುದರ ಮೂಲಕ ಪ್ರಾಥಮಿಕ ಶಿಕ್ಷಣವನ್ನು ಗ್ರಹಿಸಬಹುದು. ಪಂಚವಾರ್ಷಿಕ ಯೋಜನೆಗಳ ಜೊತೆಗೆ ಭಾರತದಲ್ಲಿ ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯ ವಿಕಾಸಕ್ಕಾಗಿ ಅನೇಕ ಸಮಿತಿಗಳನ್ನು ಹಾಗೂ ಆಯೋಗಗಳನ್ನು ನೇಮಿಸಲಾಯಿತು. ಈ ಸಮಿತಿಗಳು ಆಯೋಗಗಳನ್ನು ಮಾಡಿದ ಬಹುತೇಕ ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸಿ ಪ್ರಾಥಮಿಕ ಶಿಕ್ಷಣ ಪ್ರಾಥಮಿಕ ಶಾಲಾ ವ್ಯವಸ್ಥೆಗಳ ಪರಿಣಾತ್ಮಕ ಹಾಗೂ ಗುಣಾತ್ಮಕ ಅಭಿವೃದ್ಧಿಗಾಗಿ ಕ್ರಮ ಕೈಗೊಳ್ಳಲಾಯಿತು. ಮೊದಲನೆಯ ಪಂಚವಾರ್ಷಿಕ ಯೋಜನೆಯಿಂದ ಹತ್ತನೇ ಪಂಚವಾರ್ಷಿಕ ಯೋಜನೆಯುವರಗೂ ಎಲ್ಲಾ ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ವಿಶೇಷ ಆದ್ಯತೆಯನ್ನು ನೀಡಿದ್ದು, ೬-೧೪ ವರ್ಷದೊಳಗಿನ ಎಲ್ಲಾ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣ ಸಾರ್ವತ್ರೀಕರಣ ಪ್ರಾಥಮಿಕ ಶಿಕ್ಷಣ ವಿಸ್ತರಣೆಗೊಳಿಸುವ ಗುರಿಗೆ ಹೆಚ್ಚಿನ ಮಹತ್ವ ನೀಡಲಾಗಿತ್ತು. (ಡಾ.ಮಹಾಬಳೇಶ್ವರರಾವ,೧೯೯೯, ಪು.ಸಂ.೩೨)

ಡಿ.ಪಿ.ಇ.ಪಿ. ಕಿರಿಯ ಪ್ರಾಥಮಿಕ ಶಿಕ್ಷಣವನ್ನು ಎಲ್ಲಾ ಜಿಲ್ಲೆಗಳಲ್ಲಿ ಒದಗಿಸುವಲ್ಲಿ ಸಂಪೂರ್ಣತೆಯಂನ್ನು ಸಾಧಸಿದ ನಂತರ ಈ ಯೋಜನೆಯನ್ನು ಹಿರಿಯ ಪ್ರಾಥಮಿಕ ಹಂತಕ್ಕೂ ವಿಸ್ತರಿಸಲಾಯಿತು.

## ಸರ್ವ ಶಿಕ್ಷಣ ಅಭಿಯಾನ

ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣಕ್ಕಾಗಿ ಮೊಟ್ಟಮೊದಲ ರಾಷ್ಟ್ರೀಯ ಕಾರ್ಯಕ್ರಮವನ್ನು ೨೦೦೧ ರಲ್ಲಿ ಪ್ರಾರಂಭಿಸಲಾಯಿತು. ಇದೇ ಸರ್ವ ಶಿಕ್ಷಣ ಅಭಿಯಾನ. ಶಾಲಾ ವ್ಯವಸ್ಥೆಯನ್ನು ಸಮುದಾಯದ ಒಡೆತನವನ್ನಾಗಿಸಿ ಶಿಕ್ಷಣವನ್ನು ಸಾರ್ವತ್ರೀಕರಣ ಗೊಳಿಸುವುದೆ ಇದರ ಪ್ರಯತ್ನವಾಗಿದೆ. ದೇಶಾಧ್ಯಂತ ಗುಣಮಟ್ಟ ಪ್ರಾಥಮಿಕ ಶಿಕ್ಷಣದ ಬೇಡಿಕೆಗೆ ಅನುಗುಣವಾಗಿ ಆಂಧೋಲನ ರೂಪಗೊಂಡಿದೆ. ೨೦೧೦ ರ ವೇಳೆಗೆ ೬ ರಿಂದ ೧೪ ವರ್ಷದ ಮಕ್ಕಳಿಗೆ ಉಪಯುಕ್ತ ಹಾಗೂ ಸೂಕ್ತ ಪ್ರಾಥಮಿಕ ಶಿಕ್ಷಣವನ್ನು ಒದಗಿಸುವದೆ ಸರ್ವಶಿಕ್ಷಣ ಅಭಿಯಾನದ ಉದ್ದೇಶವಾಗಿದೆ. (ಡಾ.ಎ.ಶಶಿಕಲಾ,ಡಿ. ರಾಧಾಮಣಿ,ಡಾ.ಸಿ.ಎನ್.ಸುನಿತಾ,ಪು.ಸಂ.೯೭)

ಪ್ರತಿಯೊಬ್ಬ ವ್ಯಕ್ತಿಗೂ ಪ್ರಾಥಮಿಕ ಶಿಕ್ಷಣ ಅತಿ ಅವ್ಯಶಕವಾಗಿದೆ. ಬುನಾದಿಯೇ ಇಲ್ಲದೆ ಕಟ್ಟಡ ನಿರ್ಮಾಣ ಮಾಡಲು ಸಾದ್ಯವಿಲ್ಲ ಹೀಗಾಗಿ ಪ್ರಾಥಮಿಕ ಶಿಕ್ಷಣವನ್ನು ಪ್ರತಿಯೊಬ್ಬ ಮಗು ಅತಿ ಅವಶ್ಯಕವಾಗಿ ಪಡೆಯಬೇಕು. ಪ್ರತಿಯೊಬ್ಬರು ಪ್ರಾಥಮಿಕ ಶಿಕ್ಷಣವನ್ನು ಪಡೆಯಲೆಂದು ಹಲವಾರು ಪ್ರಯತ್ನಗಳನ್ನು ಮಾಡಲಾಗಿದೆ. ಅದೇರೀತಿ ಹಲವಾರು ಯೋಜನೆಗಳು ಕಾರ್ಯಕಮಗಳು ಸಂವಿಧಾನ ಸಹ ಕಡ್ಡಾಯ ಶಿಕ್ಷಣ ನೀಡುವುದರ ಬಗ್ಗೆ ಒತ್ತಿಹೇಳಿತು. ಇತ್ತೀಚಿಗೆ ಬಹಳಷ್ಟು ಜನರು ಪ್ರಾಥಮಿಕ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಅನೇಕ ಮಕ್ಕಳು ಪ್ರಾಥಮಿಕ ಶಿಕ್ಷಣವನ್ನು ಪಡೆಯುತ್ತಿದ್ದರೂ, ಇನ್ನೂ ಅನೇಕ ಕಾರಣಗಳಿಂದ ಕೆಲವು ಮಕ್ಕಳು ಪ್ರಾಥಮಿಕ ಶಿಕ್ಷಣ ದಿಂದ ವಂಚಿತರಾಗಿದ್ದಾರೆ. ಅದರಲ್ಲೂ ಮುಸ್ಲಿಂ ಮಕ್ಕಳು ಹೀಗಾಗಿ ಪ್ರತಿಯೊಬ್ಬರಿಗೂ ಪ್ರಾಥಮಿಕ ಶಿಕ್ಷಣದ ಅರಿವು ಮೂಡಿಸಿ ಪ್ರಾಥಮಿಕ ಶಿಕ್ಷಣ ಪಡೆಯುವಂತೆ ಮಾಡಬೇಕು. ಅಂದಾಗ ಮಾತ್ರ ನಮ್ಮ ದೇಶದ ಅಭಿವೃದ್ದಿ ಹಾಗೂ ಪ್ರತಿಯೊಂದು ಸಮುದಾಯದ ಅಭಿವೃದ್ಧಿಯಾಗುತ್ತದೆ.

## ಉಲ್ಲೇಖಗಳು

೧. ಓಬಳೇಶ ಘಟ್ಟ ,೧೯೯೨, ಭಾರತೀಯ ಶಿಕ್ಷಣ ಮತ್ತು ಪ್ರಚಲಿತ ಸಮಸ್ಯೆ , ತೋರನಘಟ್ಟ, ಶಿವಗಂಗ ಪ್ರಕಾಶನ.

೨. ಡಾ. ಮಹಾಬಲೇಶ್ವರರಾವ, ೧೯೯೯, ಬೆಂಗಳೂರು, ನವ ಕರ್ನಾಟಕ ಪಬ್ಲಿಕೇಶನ್.

೩. ಡಾ.ಮಹಬಲೇಶ್ವರರಾವ, ೧೯೯೦, ಭಾರತದಲ್ಲಿ ಪ್ರಾಥಮಿಕ ಶಿಕ್ಷಣ, ಅನು: ಜೆ.ಪಿ.ನಾಯಕ್, ಮೈಸೂರು, ಗೀತಾ ಬುಕ್ ಹೌಸ್.

೪. ಮಹ್ಮದ್ ಕುಳಾಯಿ, ೨೦೦೦, ಬಿ.ಎನ್.ಶರ್ಫುದ್ದೀನ್, ಶಿಕ್ಷಣ ಮತ್ತು ಮುಸ್ಲಿಂರು, ಮಂಗಳೂರು, ಮುಸ್ಲಿಂ ಲೇಖಕರ ಸಂಘ.

೫. ಡಾ. ಲಿಡಿಯಾ ಫರ್ನಾಂಡಿಸ್, ಡಾ. ಆನಂದ್ ಮಾರ್ಟಿಸ್, ಡಾ. ಎ. ಶಶಿಕಲಾ, ೨೦೦೩, ಅನು: ಡಾ. ಎ.ಶಶಿಕಲಾ, ರಾಧಾಮಣಿ.ಡಿ, ಸುನಿತಾ.ಸಿ.ಎನ್., ಮೈಸೂರು ವಿಜಯ ಲಕ್ಷ್ಮಿ ಪ್ರಕಾಶನ.

೬. ಶ್ರೀಧರ್.ಎ., ಪ್ರಶಾಂತ್.ಎಚ್.ಡಿ(ಸಂ), ೨೦೦೬ ,ಅಭಿವೃದ್ಧಿ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪ್ರಸಾರಂಗ.

# ೩.

# ಕರ್ನಾಟಕದಲ್ಲಿ ಜನಗಣತಿ ಮತ್ತು ಶಾಲಾ ಗಣತಿಯಲ್ಲಿನ ಅಂಕಿಅಂಶಗಳ ವಿಶ್ಲೇಷಣೆ.

೩

## ಕರ್ನಾಟಕದಲ್ಲಿ ಜನಗಣತಿ ಮತ್ತು ಶಾಲಾ ಗಣತಿಯಲ್ಲಿನ ಅಂಕಿಅಂಶಗಳು

ಯಾವುದೇ ರಾಜ್ಯ ಅಥವಾ ರಾಷ್ಟ್ರದ ಪ್ರಗತಿ ಅಲ್ಲಿಯ ಶಿಕ್ಷಣವೇ ಕಾರಣವಾಗುತ್ತದೆ. ಶಿಕ್ಷಣವೆಂಬುದು ಮಾನವನ ಜೀವನದ ಸರ್ವತೋಮುಖದ ಅಭಿವೃದ್ಧಿಗೆ ಕಾರಣವಾಗುತ್ತದೆ.

ಕರ್ನಾಟಕದ ಹಲವೆಡೆಗಳಲ್ಲಿ ಹಿಂದೆ ಪ್ರಾಚೀನ ಸಂಸ್ಥೆಗಳಾದ ಮಸೀದಿಗಳು, ಅಗ್ರಹಾರಗಳು, ಬ್ರಹ್ಮ ಪುರಿಗಳು, ಘಟಕ ಸ್ಥಾನಗಳು, ಮಠಗಳು ಅಸ್ತಿತ್ವದಲ್ಲಿದ್ದವು. ಇವು ಶಿಕ್ಷಣವನ್ನು ಭೋಧಿಸುತ್ತಿದ್ದವು. (ಡಾ. ಲಿಡಿಯಾ ಫರ್ನಾಡಿಸ್, ಡಾ. ಆನಂದಿ ಮಾರ್ಟಿಸ್, ಡಾ. ಎ. ಶಶಿಕಲಾ, ೨೦೦೩, ಪು.ಸಂ. ೧೦೭).

ಕರ್ನಾಟಕದ ಮುಸ್ಲಿಮರು ಶೈಕ್ಷಣಿಕ ಸ್ಥಿತಿ ತುಂಬಾ ಶೋಚನಿಯವಾಗಿತ್ತು. ಇದಕ್ಕೆ ಕಾರಣ ಆರ್ಥಿಕ ಸ್ಥಿತಿ ತುಂಬಾ ಖೇದವಾಗಿತ್ತು. ಅದೇರಿತಿ ಮುಸ್ಲಿಮರು ಎಲ್ಲಾ ಕ್ಷೇತ್ರದಲ್ಲಿ ಹಿಂದುಳಿದಿದ್ದರು ಸಂವಿಧಾನದತ್ತವಾದ ಅವಕಾಶಗಳನ್ನು ಸದುಪಯೋಗವಾಗಿ ಪಡೆದುಕೊಳ್ಳುವಲ್ಲಿ ಮುಸ್ಲಿಮರು ಅಜ್ಞಾನಿಗಳಾಗಿ, ಮೈಗಳ್ಳರಾಗಿ ಆಲಸೀ ಜೀವನವನ್ನು ನಡೆಸುತ್ತಿರುವುದು ಪ್ರಮುಖ ಕಾರಣವಾಗಿದೆ.

ಅದರಲ್ಲೂ ಸ್ತ್ರೀಯರ ಶೈಕ್ಷಣಿಕ ಸ್ಥಿತಿಯನ್ನು ಗಮನಿಸಿದರೆ ಪ್ರಾಚೀನ ಕಾಲದಿಂದಲೂ ಮಹಿಳೆಯರು ಶೈಕ್ಷಣಿಕವಾಗಿ, ರಾಜಕೀಯವಾಗಿ, ಸಮಾಜಿಕವಾಗಿ, ಧಾರ್ಮಿಕವಾಗಿ ಶೋಷಣೆಗೆ ಒಳಗಾಗಿದ್ದಾರೆ. ಪ್ರಸ್ತುತವಾಗಿ ಕರ್ನಾಟಕದಲ್ಲಿ ಮಹಿಳಾ ಶಿಕ್ಷಣವು ಸಾಕಷ್ಟು ಬದಲಾವಣೆಗಳು ಮತ್ತು ಗೊಂದಲಗಳನ್ನು ಹೊಂದಿದೆ. ೧೮ನೇ ಶತಮಾನದಿಂದೀಚೆಗೆ ಸ್ತ್ರೀಯರಲ್ಲಿ ಶೋಷಣೆಯಿಂದ ವಿಮುಕ್ತಿಗೊಳ್ಳುವ ಅಲೆಯದ್ದು ಮಹಿಳಾ ಶಿಕ್ಷಣ ಮಹತ್ವ ಪಡೆದು ಕೊಳ್ಳುವಂತಾಯಿತು. (ಮಹ್ಮದ್ ಕುಳಾಯಿ, ಡಿ.ಎನ್ ಶರ್ಫುದ್ದೀನ್, ಅಕ್ಬರ್ ಅಲಿ, ೨೦೦೦, ಪು.ಸಂ. ೯೦).

ಕರ್ನಾಟಕದ ಮುಸ್ಲಿಮರು ಶೈಕ್ಷಣಿಕ ಕ್ಷೇತ್ರದಲ್ಲಿ ಪರಿಶಿಷ್ಟಜಾತಿ ಮತ್ತು ಪಂಗಡ ಜನರಿಗಿಂತ ಹಿಂದುಳಿದಿದ್ದಾರೆ. ಆದುದರಿಂದ ಮುಸ್ಲಿಂರ ಶೈಕ್ಷಣಿಕ ಕ್ರಾಂತಿಗಾಗಿ ಸಜ್ಜಾಗಬೇಕು, ಧಾರ್ಮಿಕ ಹಾಗೂ ಸಂಸ್ಕೃತಿಕ ಇಸ್ಲಾಮಿಕ ಸಂಘ ಸಂಸ್ಥೆಗಳು ದುಡಿಯಬೇಕು. (ಮಹ್ಮದ್ ಕುಳಾಯಿ, ಡಿ.ಎನ್ ಶರ್ಫುದ್ದೀನ್, ಅಕ್ಬರ್ ಅಲಿ, ೨೦೦೦, ಪು.ಸಂ. ೯೫).

ಭಾರತೀಯ ಮುಸ್ಲಿಮರ ಶೈಕ್ಷಣಿಕ ಹಿಂದುಳಿವಿಕೆ ಮಟ್ಟವನ್ನು ತಿಳಿಯಲು ಯಾವುದೇ ಅಧಿಕೃತವಾದ ಅಂಕಿ-ಅಂಶಗಳು ಇಲ್ಲಿಯವರೆಗೂ ಲಭ್ಯವಾಗಿಲ್ಲ. ಲಭ್ಯವಾದರು ಅವು ಸರಿಯಾದ ಪೂರ್ಣ ಮಾಹಿತಿಯು ನೀಡಲಿಲ್ಲ ಆದ್ದರಿಂದ ಭಾರತೀಯ ಮುಸ್ಲಿಮರ ಶೈಕ್ಷಣಿಕ ಹಿದುಳಿವಿಕೆ ಮಟ್ಟವನ್ನು ತಿಳಿಯಲು ಆಸಕ್ತಿ ಇರುವ ಯಾವುದೇ ವ್ಯಕ್ತಿ ಕೆಲವು ವಿದ್ವಾಂಸರು ಮತ್ತು ಕೆಲವು ಸ್ವತಂತ್ರ ಸಂಘಟನೆಗಳು ದೇಶದ ಕೆಲವು ಭಾಗಗಳಲ್ಲಿ ನಡೆಸಿದ ಅಧ್ಯಯನ ವನ್ನು ಅವಲಂಬಿಸಿದೆ. (ಮಹ್ಮದ್ ಕುಳಾಯಿ, ಡಿ.ಎನ್ ಶರ್ಫುದ್ದೀನ್, ಅಕ್ಬರ್ ಅಲಿ, ೨೦೦೦, ಪು.ಸಂ.೪೭).

ಕರ್ನಾಟಕದಲ್ಲಿ ಗೋಖಲೆ ಇನ್‌ಸ್ಟಿಟ್ಯೂಶನ್ ಆಫ್ ಪೂನ ನಡೆಸಿದ ಸಂಶೋಧನೆಯ ಸಾರವು ಹೀಗಿದೆ. ಮುಸ್ಲಿಂ ಮಕ್ಕಳ ಒಂದು ದೊಡ್ಡ ಪ್ರಮಾಣವು ಪ್ರಾಥಮಿಕ ಶಿಕ್ಷಣದಿಂದ ವಂಚಿತವಾಗಿದೆ. ಅದೇ ವೇಳೆ ಇನ್ನೊಂದೆಡೆ ಮುಸ್ಲಿಂ ಮಕ್ಕಳು ಹೈಸ್ಕೂಲ ಮಟ್ಟದವರೆಗೆ ಮುಂದುವರಿಯುತ್ತಾರೆ ಮತ್ತು ಅಲ್ಲಿ ಅನುತ್ತೀರ್ಣರಾಗಿ ತಮ್ಮ ಅಕ್ಷರ ಜ್ಞಾನವನ್ನು ಮರೆತು ಅನಕ್ಷರರಾಗಿ ಉಳಿಯುತ್ತಾರೆ. (ಡೆಕ್ಕನಹೆರಾಲ್ಡ್ ೧೯೮೪) ಈ ಭಾರತದಲ್ಲೆ ಅತಿ ಹೆಚ್ಚು ಸಾಕ್ಷರರಿರುವ ರಾಜ್ಯವಾದ ಕೇರಳದಲ್ಲಿ ಮುಸ್ಲಿಮರ ಶೈಕ್ಷಣಿಕ ಮಟ್ಟವು ಪರಿಶಿಷ್ಟ ಜಾತಿಗಳಿಗಿಂತ ಕೆಳಮಟ್ಟದಲ್ಲಿದೆ. ಎಂದು ನೆಟ್ಟೂರು ಆಯೋಗದವರದಿ (೧೯೭೦) ವಿಮರ್ಶಾತ್ಮಕ ಅಧ್ಯಯನದಿಂದ ತಿಳಿದುಬರುತ್ತದೆ. (ಮಹ್ಮದ್ ಕುಳಾಯಿ, ಡಿ.ಎನ್ ಶರ್ಫುದ್ದೀನ್, ಅಕ್ಬರ್ ಅಲಿ, ೨೦೦೦, ಪು.ಸಂ. ೪೮).

ಎ.ಬಿ. ಶಾಹ್ ವರದಿ (೧೯೮೧ )ಯ ಪ್ರಕಾರ ಕ್ರಿ.ಶ ೧೯೭೧ ರಲ್ಲಿ ಮುಸ್ಲಿಮ್ ಪುರುಷರ ಸಾಕ್ಷರತ ಪ್ರಮಾಣವು ಶೇ. ೧೦ ಮತ್ತು ಸಾಕ್ಷರ ಮುಸ್ಲಿಂ ಸ್ತ್ರೀಯರ ಪ್ರಮಾಣವು ಕೇವಲ ಶೇ. ೦.೫೦ ಆಗಿತ್ತು. ಅದರಲ್ಲಿ ಅದಿಕ ಸಂಖ್ಯೆಯಲ್ಲಿ `ಮದರಸಾ`ಗಳಲ್ಲಿ ಕಲಿತವರು ಅಥವಾ ಪ್ರಾಥಮಿಕ ಶಿಕ್ಷಣದ ಬಳಿಕ ಕಲಿಯುವಿಕೆಯನ್ನು ಸ್ಥಗಿತಗೊಳಿಸಿದ್ದನ್ನು ಈ ವರದಿ ತಿಳಿಸುತ್ತದೆ . ಈ ವರದಿಯನ್ನು ಗಮನಿಸಿದರೆ, ಮುಸ್ಲಿಮರು ಶೈಕ್ಷಣಿಕವಾಗಿ ಎಷ್ಟು ಹಿಂದುಳಿದಿದ್ದಾರೆ, ಅದರಲ್ಲೂ ಸ್ತ್ರೀಯರು ಶೈಕ್ಷಣಿಕವಾಗಿ ತುಂಬಾ ಹಿಂದುಳಿದಿದ್ದಾರೆ ಎಂಬುದು ಈ ವರದಿ ಯಿಂದ ತಿಳಿದುಬರುತ್ತದೆ.

ಸ್ವತಂತ್ರ್ಯ ಬಂದ ನಂತರ ಕರ್ನಾಟಕದಲ್ಲಿ ಶಿಕ್ಷಣದ ಅಗತ್ಯವಾದ ಬದಲಾವಣೆಗಳು ಆಗಬೇಕಾಗಿತ್ತು, ಶೈಕ್ಷಣಿಕ ವಿಚಾರದಲ್ಲಿ ಪರತಂತ್ರ ಪದ್ಧತಿಯೇ ಮುಂದುವರೆಯಿತು. ಗಾಂಧೀಜಿಯವರು ಈ ದೇಶದ ಸಂಸ್ಕೃತಿ, ಆರ್ಥಿಕ, ಸಮಾಜಿಕ, ರೀತಿಗಳಿಗೆ ಹೊಂದುವಂತಹ ಶಿಕ್ಷಣ ನೀತಿಯನ್ನು ರೂಪಿಸಿದ್ದರು. ೧೯೬೬ ರಲ್ಲಿ ಪ್ರಾಥಮಿಕ ಶಿಕ್ಷಣ ಆಯೋಗ ಪ್ರಾಥಮಿಕ ಶಿಕ್ಷಣದ ಮಹತ್ವದ ಬಗ್ಗೆ ಗಮನ ಸೆಳೆಯಿತು.

ಸ್ವತಂತ್ರೋತ್ತರದ ಎರಡು ದಶಕಗಳ ಬಳಿಕ ಈ ಆಯೋಗದ ಚಿಂತನೆ ಪರಿಣಾಮವಾಗಿಯೆ ೧೯೬೮ರಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿಯು ರೂಪಿತವಾಯಿತು. ಅದರಲ್ಲಿ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣಕ್ಕೆ ಒತ್ತು ನೀಡಿತು. ಜನತಾ ಸರಕಾರ ಬಂದು ಹತ್ತು ವರ್ಷದ ಬಳಿಕ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣದ ಗುರಿ ಪ್ರಸ್ತಾಪಿಸಿತು.(ಸಚ್ಚಿದಾನಂದ, ಸುವರ್ಣ ಶಿಕ್ಷಣ ಪು.ಸಂ. ೧೦೯-೧೧೦).

ಕರ್ನಾಟಕದಲ್ಲಿ ಆಧುನಿಕ ಶಿಕ್ಷಣದ ಪ್ರಾರಂಭಿಕೆ ಈ ಕೆಳಗಿನ ಶಾಲೆಗಳ ಸ್ಥಾಪನೆಯೊಂದಿಗೆ ಆರಂಭವಾಯಿತು.

ಮೈಸೂರು ಅರಮನೆ ೧೮೩೩ರಲ್ಲಿ ಸ್ಥಾಪಿಸಿದ ಫ್ರೀ ಇಂಗ್ಲೀಷ್ ಸ್ಕೂಲ್

೧೮೨೬ರಲ್ಲಿ Bombay native school ಧಾರವಾಡದಲ್ಲಿ School Book Society ಹುಬ್ಬಳ್ಳಿಯಲ್ಲಿ ಸ್ಥಾಪಿಸಿದ ಎರಡು ಮರಾಠಿ ಪ್ರಾದೇಶಿಕ ಭಾಷಾ ಶಾಲೆಗಳು.

ಮದ್ರಾಸ್ ಕರ್ನಾಟಕ ಪ್ರದೇಶಕ್ಕಾಗಿ ೧೮೩೮ರಲ್ಲಿ ಸ್ಥಾಪನೆಗೊಂಡ ಮಂಗಳೂರು, ಉಡುಪಿ ಮತ್ತು ಬಳ್ಳಾರಿಗಲ್ಲಿನ ಶಾಲೆಗಳು.

ಗುಲ್ಬರ್ಗಾ ಪ್ರದೇಶಕ್ಕಾಗಿ ೧೮೫೩ರಲ್ಲಿ ಸರ್ ಸಲಾರ್‌ಜಂಗ್‌ರವರು ಸ್ಥಾಪಿಸಿದ 'ದಾರುಲ್ ಉಲೂಮ್'.

ಕೊಡಗು ಪ್ರದೇಶಕ್ಕಾಗಿ ೧೮೩೪ರಲ್ಲಿ ಮಡಿಕೇರಿ

ಕೊಡಗು ಪ್ರದೇಶಕ್ಕಾಗಿ ೧೮೩೪ರಲ್ಲಿ ಮಡಿಕೇರಿ ಮತ್ತು ವಿರಾಜಪೇಟೆಗಳಲ್ಲಿ ಪ್ರಾರಂಭವಾದ ಎರಡು ಆಂಗ್ಲ ಪ್ರಾದೇಶಿಕ ಭಾಷಾ ಶಾಲೆಗಳು ಹಾಗು ಪೊನ್ನಂಪೇಟೆಯಲ್ಲಿ ಸರ್ಕಾರ ಸ್ಥಾಪಿಸಿದ ಶಾಲೆಗಳು.

ಶಿಕ್ಷಣ ಸಮನ್ವಯ ಸಲಹಾ ಸಮಿತಿ (Education Integration Advisory Committee) ಪ್ರಾಥಮಿಕ ಶಿಕ್ಷಣವು 'ಏಳುವರ್ಷಗಳ' ಸಮಗ್ರ ಕೋರ್ಸ ಆಗಬೇಕೆಂದು ಶಿಫಾರಸ್ಸು ಮಾಡಿತು. ನಂತರ ನಾಲ್ಕುವರ್ಷಗಳ ಪ್ರಾಥಮಿಕ ಹಾಗೂ ನಾಲ್ಕು ವರ್ಷಗಳ ಮಾಧ್ಯಮಿಕ ಶಾಲಾಶಿಕ್ಷಣವನ್ನು ಒಟ್ಟು ಗೂಡಿಸಿ ಎಂಟು ವರ್ಷಗಳ ಸಮಗ್ರ ಕೋರ್ಸ್ ಆಗಿ ರೂಪಿಸಲಾಯಿತು. ಹಂತ ಹಂತವಾಗಿ ಒಂದು ಸಮನ್ವಯ ಪಠ್ಯ ಪುಸ್ತಕವನ್ನು ರಚಿಸಿ ಜಾರಿಗೊಳಿಸಲಾಯಿತು. ಇದು ೧೯೫೯ - ೬೦ರಿಂದ ಪ್ರಾರಂಭವಾಗಿ, ೧೯೬೨-೬೩ರ ವೇಳೆಗೆ ರಾಜ್ಯದ ಎಲ್ಲಾ ಪ್ರಾಥಮಿಕ ಶಾಲೆಗಳು ಏಕರೂಪದ ಪಠ್ಯಕ್ರಮ ಮತ್ತು ಪಠ್ಯಪುಸ್ತಕವನ್ನು

ಅಳವಡಿಸಲಾಯಿತು. (ಡಾ. ಲಿಡಿಯಾ ಫರ್ನಾಡಿಸ್, ಡಾ. ಆನಂದಿ ಮಾರ್ಟಿಸ್, ಡಾ. ಎ. ಶಶಿಕಲಾ, ೨೦೦೩, ಪು.ಸಂ. ೧೦೭-೧೦೮).

ಸಂವಿಧಾನದಲ್ಲಿ ಹೇಳಿದ `ಕಡ್ಡಾಯ ಶಿಕ್ಷಣ` ಕರ್ನಾಟಕದಲ್ಲಿಯೂ ಜಾರಿಗೆ ಬಂದಿತು. ಆದರೆ ಅದರ ಕಾರ್ಯಾನುಷ್ಠಾನ ಆದದ್ದು ಅಲ್ಪವೆಂದು ಹೇಳಬೇಕಾಗುತ್ತದೆ. ಪ್ರತಿವರ್ಷ ಕಡ್ಡಾಯ ಶಿಕ್ಷಣಕ್ಕೆ ಅರ್ಹ ಬಾಲಕ ಬಾಲಕಿಯರನ್ನು ಗುರುತಿಸುವ ಶಾಲೆಗೆ ಸೇರಿಸುವ ಕಾರ್ಯ ನಡೆಯುತ್ತಲೇ ಬಂದಿದೆ. ಆದರೆ ಆ ವಿದ್ಯಾರ್ಥಿಗಳು ಶಾಲೆಗೆ ದಾಖಲಾದವರು ಎಷ್ಟು ಜನ ಉಳಿದರು ಮಧ್ಯದಲ್ಲಿಯೇ ಬಿಟ್ಟು ಹೋಗುವವರೆಷ್ಟು ಸ್ವಾತಂತ್ರ್ಯ ಬಂದು ಹಲವು ಬಗೆಯ ಅನುಕೂಲತೆಗಳು ದೊರೆತರೂ ೮೬-೮೭ರಲ್ಲಿ ಶಾಲೆ ಬಿಡುವವರ ಸಂಖ್ಯೆ ಶೇ. ೬೮ ಆಗಿತ್ತು.

೧೯೮೪ ರಲ್ಲಿ ಕರ್ನಾಟಕ ತನ್ನದೇ ಆದ ವಿಶಿಷ್ಟ ಶಿಕ್ಷಣ ಕಾರ್ಯಕ್ರಮವೊಂದನ್ನು ರೂಪಿಸಿತು. ಅದರಲ್ಲಿ ೩ ರಿಂದ ೬ನೇ ವಯಸ್ಸಿನವರೆಗಿನ ಮಕ್ಕಳಿಗೆ ಪೂರ್ವ ಪ್ರಾಥಮಿಕ ಶಿಕ್ಷಣ ಪ್ರಾಥಮಿಕ ಶಾಲೆಗಳಲ್ಲಿ ದಾಖಲಾಗದ ಅಥವಾ ಸೇರಿ ಬಿಟ್ಟುಹೋದ ವಿದ್ಯಾರ್ಥಿಗಳಿಗಾಗಿ ಅನೌಪಚಾರಿಕ ಶಿಕ್ಷಣ ಮತ್ತು ೧೪ ರಿಂದ ೩೫ ವಯಸ್ಸಿನವರೆಗಿನ ವಯಸ್ಕರ ಶಿಕ್ಷಣ ಒದಗಿಸದ ಯೋಜನೆ ಮಾಡಲಾಯಿತು. (ಡಾ. ಕೃಷ್ಣಕುಮಾರ್ ಸಿ.ಪಿ (ಸಂ), ಪ್ರೊ. ಶಿವರಾಮ್ ಕಾಡನುಕುಪ್ಪೆ, ೨೦೦೧ ಸುವರ್ಣ ಶಿಕ್ಷಣ, ಪು.ಸಂ.೧೧೧).

ಸ್ವತಂತ್ರ ದೊರೆತು ಮೂರು ದಶಕಗಳಲ್ಲಿ ಕರ್ನಾಟಕದಲ್ಲಿ ಪ್ರಾಥಮಿಕ ಶಾಲೆಗಳ ಸಂಖ್ಯೆ ಹೆಚ್ಚುತ್ತಾ ಹೋಗಿ, ೧೯೭೬-೭೭ರ ಒಂದು ಅಂಕಿಯ ಆಧಾರದ ಮೇಲೆ ಹೇಳುವುದಾದರೆ ಆಗ ೨೧,೭೯೯ ಕಿರಿಯ ಪ್ರಾಥಮಿಕ ಶಾಲೆಗಳು ೧೧,೩೮೮ ಹಿರಿಯ ಪ್ರಾಥಮಿಕ ಶಾಲೆಗಳು ಅಸ್ತಿತ್ವದಲ್ಲಿದ್ದವು. (ಒಟ್ಟು ೩೩೧೩೭ ಪ್ರಾಥಮಿಕಶಾಲೆಗಳು) ಅದರಲ್ಲಿ ೩೪.೪೪ ಲಕ್ಷ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದರು.

೧೮,೯೯,೦೯೩ ಬಾಲಕರು, ೧೪,೪೪,೪೮೮ ಬಾಲಕಿಯರು ಒಟ್ಟು ೩೩,೪೩,೮೪೧ ಅಲ್ಲಿಂದ ಸುಮಾರು ೨೦ ವರ್ಷಗಳ ಬಳಿಕ ಅಂದರೆ ೧೯೯೮-೯೯ರ ದಾಖಲಾತಿಯಂತೆ ೨೩.೦೯೬ ಕಿರಿಯ ಪ್ರಾಥಮಿಕ ಶಾಲೆಗಳು ೨೪೮೫೮ ಹಿರಿಯ ಪ್ರಾಥಮಿಕ ಶಾಲೆಗಳು  ಕಾರ್ಯ ನಿರ್ವಹಿಸುತ್ತವೆ. ಹಾಗೆಯೇ ೨೯,೦೦೦ ಅಂಗನವಾಡಿ ಕೇಂದ್ರಗಳು ರಾಜ್ಯದಲ್ಲಿವೆ. ಕಿರಿಯ ಪ್ರಾಥಮಿಕ ಶಾಲೆಗಳಲ್ಲಿ ೨೭,೯೮ ಲಕ್ಷ ಬಾಲಕರು, ೨೬.೪೮ ಲಕ್ಷ ಬಾಲಕಿಯರು ವ್ಯಾಸಂಗ ಮಾಡುತ್ತಿದ್ದಾರೆ. ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ೧೫.೭೫ ಲಕ್ಷ ಹುಡುಗರು ೧೩.೫೫ ಲಕ್ಷ ಹುಡುಗಿಯರು ಕಲಿಯುತ್ತಿದ್ದಾರೆ.

೧೮೮೬ ರಿಂದ ೧೯೯೯ರ ಮಧ್ಯದಲ್ಲಿಯೇ ಶಾಲೆಬಡುವವರ ಅಂಕಿಅಂಶಗಳ ವಿವರಣೆ ಈ ರೀತಿಯಾಗಿದೆ.

| ವರ್ಷ | ಬಾಲಕರು | ಬಾಲಕಿಯರು | ಒಟ್ಟು |
|---|---|---|---|
| ೮೬-೮೭ | ೬೩.೩೪ | ೬೭.೮೫ | ೬೫.೪೧ |
| ೯೦-೯೧ | ೫೧.೩೩ | ೫೮.೨೫ | ೫೪.೬೩ |
| ೯೬-೯೭ | ೪೫.೬೫ | ೪೮.೦೯ | ೪೬.೮೧ |
| ೯೭-೯೮ | ೪೧.೩೪ | ೪೧.೨೮ | ೪೩.೭೧ |
| ೯೮-೯೯ | ೩೮.೬೮ | ೪೩.೨೭ | ೪೦.೮೮ |

ಆಧಾರ: (ಡಾ. ಕೃಷ್ಣಕುಮಾರ್ ಸಿ.ಪಿ (ಸಂ), ಪ್ರೊ. ಶಿವರಾಮ್ ಕಾಡನುಕುಪ್ಪೆ, ೨೦೦೧ ಸುವರ್ಣ ಶಿಕ್ಷಣ ಪು.ಸಂ.೧೦೫).

ಈ ಅಂಕಿ ಅಂಶವನ್ನು ಗಮನಿಸಿದರೆ, ಮಧ್ಯದಲ್ಲಿ ಶಾಲೆಬಿಡುವ ಮಕ್ಕಳ ಸಂಖ್ಯೆ ಇಳಿಮುಖ ವಾಗುತ್ತಲೇ ಬಂದಿತು, ಈ ಶಾಲೆಗಳಲ್ಲಿ ಸುಮಾರು ೪೦.೦೦೦ ಸರಕಾರಿ ಶಾಲೆಗಳು ೮ ಸಾವಿರದಷ್ಟು ಖಾಸಗಿ ಶಾಲೆಗಳಿರಬಹುದು. ಸರಕಾರಿ ಶಾಲೆಗಳು ಗ್ರಾಮೀಣ ಪ್ರದೇಶಗಳಲ್ಲೇ ಹೆಚ್ಚು, ನಗರ ಪಟ್ಟಣ ಪ್ರದೇಶಗಳಲ್ಲಿ ಕಡಿಮೆ ಇದೆ.

ಕರ್ನಾಟಕವು ಭಾರತದಲ್ಲಿ ಎಂಟನೆಯ ದೊಡ್ಡ ರಾಜ್ಯ, ಸಾಕ್ಷರತೆಯಲ್ಲಿ ರಾಷ್ಟ್ರದ ಸರಾಸರಿಯಾದ ಶೇ. ೬೭ ಕ್ಕಿಂತ ಹೆಚ್ಚಾಗಿದ್ದರೂ ಗಂಡು-ಹೆಣ್ಣು ಮಕ್ಕಳ ನಡುವಿನ ಸಾಕ್ಷರತೆ ಪ್ರಮಾಣದಲ್ಲಿ ಬಹಳ ವ್ಯತ್ಯಾಸವಿದೆ.

೨೦೦೧ರ ಜನಗಣತಿ ವರದಿ ಪ್ರಕಾರ ಕರ್ನಾಟಕದ ಜನಸಂಖ್ಯೆಯು ೫೨೭ದಶಲಕ್ಷವಿದ್ದು ಜನಸಾಂದ್ರತೆ ಚದರ ಕಿಲೋ ಮೀಟರಿಗೆ ೨೭೫ರಷ್ಟಿದೆ. ಲಿಂಗ ಪ್ರಮಾಣ ಪ್ರತಿ ಸಾವಿರ ಗಂಡು ಮಕ್ಕಳಿಗೆ ೯೬೪ ಹೆಣ್ಣು ಮಕ್ಕಳಿಗೆ ೯೬೪ ಹೆಣ್ಣು ಮಕ್ಕಳಿದ್ದಾರೆ. ಲಿಂಗ ಪ್ರಮಾಣ ಪ್ರತಿ ಸಾವಿರ ಗಂಡು ಮಕ್ಕಳಿಗೆ ೯೬೪ ಹೆಣ್ಣು ಮಕ್ಕಳಿದ್ದಾರೆ. ಒಟ್ಟಾರೆ ಸಾಕ್ಷರತೆ ಪ್ರಮಾಣ ಶೇ೬೭.೦೪ ರಷ್ಟಿದ್ದರೂ, ಗಂಡು ಮಕ್ಕಳ ಸಾಕ್ಷರತೆ ಶೇ ೭೬.೨೯ರಷ್ಟು ಹೆಣ್ಣು ಮಕ್ಕಳ ಸಾಕ್ಷರತೇ ಶೇ ೫೭.೪೫ ರಷ್ಟಿದೆ. ೧೯೫೫-೫೬ ರಲ್ಲಿ ರಾಜ್ಯದಲ್ಲಿ ೨೨,೮೦೩ ಪ್ರಾಥಮಿಕ ಶಾಲೆಗಳಿದ್ದು, ೧೯,೧೭,೨೫ರ ವಿದ್ಯಾರ್ಥಿನಿಗಳಿದ್ದರು ೧೯೮೧-೮೨ರ ವೇಳೆಗೆ ಪ್ರಾಥಮಿಕ ಶಾಲೆಗಳ ಸಂಖ್ಯೆ ೩೫,೫೪೯ ಏರಿದ್ದು ಒಟ್ಟು ದಾಖಲಾತಿಯು ೫೧,೭೩,೬೨೧ ಆಯಿತು. (ಡಾ. ಲಿಡಿಯಾ ಫರ್ನಾಡಿಸ್, ಡಾ. ಆನಂದಿ ಮಾರ್ಟಿಸ್, ಡಾ. ಎ. ಶಶಿಕಲಾ, ೨೦೦೩, ಪು.ಸಂ. ೧೦೮).

೨೦೦೬ ನೇ ಸಾಲಿನಲ್ಲಿ ಒಟ್ಟು ಕರ್ನಾಟಕದಲ್ಲಿ ಒಟ್ಟು ಅಲ್ಪಸಂಖ್ಯಾತರ ಶಾಲೆಗಳ ಸಂಖ್ಯೆ ೮೯೩ ಇವೆ. ೨೦೦೬ರ ಮಕ್ಕಳ ಸಮೀಕ್ಷೆಯ ೭ ರಿಂದ ೧೪ ವಯೋಮಾನದ ಶಾಲೆಯಿಂದ ಹೊರಗುಳಿದ ಮಕ್ಕಳ ವಿವರದಲ್ಲಿ ಕರ್ನಾಟಕ ರಾಜ್ಯದಲ್ಲಿ ೭-೧೪ ವಯೋಮಾನದ ಒಟ್ಟು ಮಕ್ಕಳಸಂಖ್ಯೆ ೬೫,೮೭,೫೯೧ ಇದ್ದರೆ, ಅದಲ್ಲಿ ಗಂಡು ಮಕ್ಕಳ ಸಂಖ್ಯೆ ೩೩,೫೫,೯೭೦, ಹೆಣ್ಣು ಮಕ್ಕಳ ಸೆಂಖ್ಯೆ ೩೨,೩೧,೬೨೧ ಅದೇ ರೀತಿ ಒಟ್ಟು ಶಾಲೆಗೆ ದಾಖಲಾದವರಲ್ಲಿ ೨೫,೧೬೬ ಗಂಡು ೧೨,೩೨೭ ಹೆಣ್ಣು ೧೨,೮೩೭ ಒಟ್ಟು ಶಾಲೆಬಿಟ್ಟವರ ಸಂಖ್ಯೆಯಲ್ಲಿ ೫೦,೬೫೯ ಇದೆ. ಅದರಲ್ಲಿ ಗಂಡು ೨೪,೪೧೨ ಹೆಣ್ಣು ೨೬,೨೪೭ ಒಟ್ಟು ಶಾಲೆಯಿಂದ ಹೊರಗುಳಿದವರ ಸಂಖ್ಯೆ ೭೫,೮೨೫ ಇದೆ. ಗಂಡು ಮಕ್ಕಳ ಸಂಖ್ಯೆ ೩೬,೭೪೧ ಹೆಣ್ಣು ಮಕ್ಕಳ ಸಂಖ್ಯೆ ೩೯೦೮೪ ಇದೆ. (ಸಮಗ್ರ ಅಂಕಿ ಅಂಶ, ೨೦೦೬ರ ವರದಿ, ಪು.ಸಂ. ೫೭೩).

**ಕೊಪ್ಪಳ ಜಿಲ್ಲೆಯ ಶೈಕ್ಷಣಿಕ ಸ್ಥಿತಿಗತಿ**

ನನ್ನ ಅಧ್ಯಯನಕ್ಕೆ ಗಂಗಾವತಿ ತಾಲೂಕು ತೆಗೆದುಕೊಂಡದ್ದರಿಂದ ಗಂಗಾವತಿ ತಾಲೂಕ ಕೊಪ್ಪಳ ಜಿಲ್ಲೆಯಲ್ಲಿ ಒಳಗೊಂಡಿದೆ. ಹೀಗಾಗಿ ಕೊಪ್ಪಳ ಜಿಲ್ಲೆಯ ಶೈಕ್ಷಣಿಕ ಸ್ಥಿತಿ ಗತಿ ತಿಳಿಯುವುದು ಸಹ ಅವಶ್ಯಕವಾಗಿದೆ.

ಕೊಪ್ಪಳ ಜಿಲ್ಲೆಯು ೧-೦೪-೧೯೯೮ ರಂದು ರಾಯಚೂರು ಜಿಲ್ಲೆಯಿಂದ ವಿಭಜಿಸಲ್ಪಟ್ಟಿದ್ದು, ಪ್ರತ್ಯೇಕ ಕೊಪ್ಪಳ ಜಿಲ್ಲೆಯಾಗಿ ರೂಪಗೊಂಡಿತು. ಇಲ್ಲಿ ಹಲವಾರು ಪ್ರಮುಖ ಶಾತವಾಹನರು, ಗಂಗರು, ಹೊಯ್ಸಳರು ಹಾಗು ಚಾಲುಕ್ಯರ ರಾಜ-ವಂಶದವರು ಆಳಿದ ದಾಖಲೆಗಳಿವೆ. ಈ ಜಿಲ್ಲೆಯ ಒಟ್ಟು ವಿಸ್ತೀರ್ಣ ೫,೫೫೯ ಚ.ಕಿ.ಮೀ. ಇದ್ದು ಜಿಲ್ಲೆಯನ್ನು ೪ ತಾಲೂಕುಗಳಾಗಿ ವಿಭಾಗಿಸಲಾಗಿದೆ (ಜಿಲ್ಲಾ ಪಂಚಾಯತಿ ಕೊಪ್ಪಳ, ೨೦೦೪-೨೦೦೫ ನೇ ಸಾಲಿನ ಮಾಹಿತಿ).

ಕೊಪ್ಪಳ ಜಿಲ್ಲೆಯು ರಾಜಕೀಯವಾಗಿ ಹಿಂದುಳಿದಿದೆ. ಹೀಗೆ ರಾಜಕೀಯವಾಗಿ ಹಿಂದುಳಿವಿಕೆಗೆ ಅಂತಿಮ ಕಾರಣ ಆ ಪ್ರದೇಶದ ಶೈಕ್ಷಣಿಕ ಹಿಂದುಳಿವಿಕೆಯೇ ಕಾರಣವಾಗಿದೆ. ಶಿಕ್ಷಣದಲ್ಲಿ ದಾವಣಗೆರೆ, ಗದಗ, ಬಾಗಲಕೋಟೆ, ಉಡುಪಿ, ಹಾವೇರಿ ಮತ್ತು ಚಾಮರಾಜನಗರ ಜಿಲ್ಲೆಗಳಿಗೆ ಹೋಲಿಸಿದರೆ ಕೊಪ್ಪಳ ಜಿಲ್ಲೆಯು ಹಿಂದುಳಿದ ಜಿಲ್ಲೆಯಾಗಿದೆ.

ಮೊಗಲ್ ಸಾಮ್ರಾಜ್ಯದ ದಕ್ಷಿಣದ ಸುಬೇದಾರ ಮೀರ್ ಕರಿಮುದ್ದೀನ್ ಕ್ರಿ.ಶ. ೧೭೨೪ರಲ್ಲಿ ಹೈದರಾಬಾದ ಸಂಸ್ಥಾನ ಸ್ಥಾಪಿಸಿದ. ಈ ಸಂಸ್ಥಾನವು ಕೊಪ್ಪಳ ಜಿಲ್ಲೆಯನ್ನೊಳಗೊಂಡ ಹದಿನೆಂಟು ಜಿಲ್ಲೆಗಳ ಪೈಕಿ ಒಂದಾಗಿತ್ತು.( ಪ್ರೊ. ಅಲ್ಲಮಪ್ರಭು, ಬೆಟ್ಟದೂರು, ಶ್ರೀ. ಎಚ್.ಎನ್. ಪಾಟೀಲ್, ೨೦೦೫,

ಪು.ಸಂ.೧೫). ೧೮೫೩ ರಲ್ಲಿ ಹೈದರಾಬಾದ ನಗರದಲ್ಲಿ ಸರ್ ಸಾಲಾರ್ ಜಂಗ್‌ರವರು ರೂಪಿಸಿದ ದಾರುಲ್-ಉಲೂಮ್ ಹೈದರಾಬಾದ್ ಕರ್ನಾಟಕದ ಮೊದಲ ಅಧ್ಯಯವಾಗಿತ್ತು. ೧೯೧೫ರಲ್ಲಿ ಹೈದರಾಬಾದಿನ ಉಸ್ಮಾನಿಯ ವಿಶ್ವವಿಧ್ಯಾಲಯ ಉರ್ದು ಭಾಷೆಯನ್ನು ಪ್ರಾಥಮಿಕ ಹಂತದಿಂದ ಪದವಿಯ ಹಂತದವರೆಗೆ ಶಿಕ್ಷಣ ಮಾಧ್ಯಮವಾಗಿ ಘೋಷಿಸಿತು. ೧೯೭೧ರ ಜನಗಣತಿ ಪ್ರಕಾರ ಇಂದಿನ ಕೊಪ್ಪಳ ಜಿಲ್ಲೆಯ ಸಾಕ್ಷರತೆ ಶೇ.೨೦.೨೦ ರಷ್ಟಿತ್ತು. ಆದರೆ ರಾಯಚೂರು ಜಿಲ್ಲೆಯ ಸಾಕ್ಷರತೆ ರಾಷ್ಟ್ರದ ಸಾಕ್ಷರತಾ ಪ್ರಮಾಣಕ್ಕಿಂತ ೨೦ ವರ್ಷ ಹಿಂದುಳಿದಿತ್ತು. ಇಪ್ಪತ್ತನೇ ಶತಮಾನದ ಕೊನೆಯ ದಶಕದ ಸಂದರ್ಭದಲ್ಲಿ ಕೊಪ್ಪಳ ಜಿಲ್ಲೆಯ ಗ್ರಾಮಗಳಲ್ಲಿ ಸಾಕ್ಷರತ ಪ್ರಮಾಣ ಪ್ರತಿಶತ ೨೦ ದಾಟಿರಲಿಲ್ಲ, ಮಹಿಳಾ ಸಾಕ್ಷರತಾ ಪ್ರಮಾಣವಂತೂ ಉಪಸಹಾರ ಆಫ್ರಿಕನ್ ದೇಶದ ಸಾಕ್ಷರತಾ ಪ್ರಮಾಣಕ್ಕಿಂತಲೂ ಕಡಿಮೆ ಇತ್ತು.

ಡಾ.ಡಿ.ಎಮ್ ನಂಜುಂಡಪ್ಪರವರ ವರದಿ ಪ್ರಕಾರ ಅಭಿವೃದ್ಧಿ ವಿಷಯಗಳಲ್ಲಿ ಕೊಪ್ಪಳ ಜಿಲ್ಲೆ ರಾಜ್ಯ ಮಟ್ಟದಲ್ಲಿ ೨೧ನೇ ಸ್ಥಾನದಲ್ಲಿದೆ. ಕೊಪ್ಪಳ ಜಿಲ್ಲೆಯ ನಾಲ್ಕು ತಾಲೂಕುಗಳು ಅತ್ಯಂತ ಹಿಂದುಳಿದ ತಾಲೂಕುಗಳ ಪಟ್ಟಿಯಲ್ಲಿ ಸ್ಥಾನ ಪಡೆದುಕೊಂಡಿವೆ. ಸಾಕ್ಷರತೆಯಲ್ಲಿ ಕೊಪ್ಪಳ ಜಿಲ್ಲೆಯು ೨೪ನೇ ಸ್ಥಾನದಲ್ಲಿದೆ. ಇವರ ವರದಿಯಿಂದ ಕೊಪ್ಪಳ ಜಿಲ್ಲೆ ಶಿಕ್ಷಣ ಅತ್ಯಂತ ಹಿಂದುಳಿದಿದ್ದು ಗಮನಿಸಬಹುದಾಗಿದೆ. (ಪ್ರೊ. ಅಲ್ಲಮಪ್ರಭು, ಬೆಟ್ಟದೂರು, ಶ್ರೀ. ಎಚ್.ಎನ್. ಪಾಟೀಲ್, ೨೦೦೫, ಪು.ಸಂ.೧೬).

೨೦೦೧ರ ಜನಗಣತಿ ಪ್ರಕಾರ ಕೊಪ್ಪಳ ಜಿಲ್ಲೆಯ ಒಟ್ಟು ಜನಸಂಖ್ಯೆ ೧೧.೯೬ ಲಕ್ಷ ಇದ್ದು ಇದರಲ್ಲಿ ೬.೦೩ ಲಕ್ಷ ಪುರುಷರಿದ್ದಾರೆ ಮತ್ತು ೫.೯೩ ಲಕ್ಷ ಮಹಿಳೆಯರು ಇದ್ದಾರೆ. ಸ್ತ್ರೀ ಪುರುಷರ ಪ್ರಮಾಣವು ೯೮೨ ಇದ್ದು ೧೯೯೧-೨೦೦೧ರ ಹತ್ತು ವರ್ಷಗಳ ಅವಧಿಯಲ್ಲಿ ಜನಸಂಖ್ಯೆ ಬೆಳವಣಿಗೆಯ ಪ್ರಮಾಣವು ೨೪.೬ ರಷ್ಟಾಯಿತು.(ಜಿಲ್ಲಾ ಪಂಚಾಯತಿ ಕೊಪ್ಪಳ ೨೦೦೪-೨೦೦೫ ನೇ ಸಾಲಿನ ಮಾಹಿತಿ). ಅದೇ ರೀತಿ ೨೦೦೧ ರ ಜನಗಗಣತಿ ಪ್ರಕಾರ ಕೊಪ್ಪಳ ಜಿಲ್ಲೆಯ ಸಾಕ್ಷರತೆಯ ಪ್ರಮಾಣ ೫೫.೦೨ಶೇ ಇದ್ದು ಪುರುಷರ ಸಾಕ್ಷರತೆಯು ಶೇ ೬೯.೧೫ ಹಾಗೂ ಮಹಿಳಾ ಸಾಕ್ಷರತೆ ೩೯.೬ಶೇರಷ್ಟಿದೆ. ಅದೇ ರೀತಿ ಪೂರ್ವ ಪ್ರಾಥಮಿಕ ಶಿಕ್ಷಣವು ನಿರೀಕ್ಷಿತ ಮಟ್ಟದ ವ್ಯಾಪ್ತಿ ಮೀರಿರಲಿಲ್ಲ. ಜಿಲ್ಲೆಯಲ್ಲಿ ೮೦ಕ್ಕೂ ಹೆಚ್ಚು ಪೂರ್ವಪ್ರಾಥಮಿಕ ಶಾಲೆಗಳಿದ್ದು ೮೯೩ ಅಂಗನವಾಡಿ ಕೇಂದ್ರಗಳಿವೆ. ಜಿಲ್ಲೆಯ ೫೮೮ ಗ್ರಾಮಗಳು ಹಾಗೂ ೪ ಪಟ್ಟಣಗಳಲ್ಲಿ ೯೫೧ ಪ್ರಾಥಮಿಕ ಶಾಲೆಗಳಿದ್ದು ೨,೧೭,೫೬೦ ವಿಧ್ಯಾರ್ಥಿಗಳು ಓದುತ್ತಿದ್ದಾರೆ. (ಪ್ರೊ. ಅಲ್ಲಮಪ್ರಭು, ಬೆಟ್ಟದೂರು, ಶ್ರೀ. ಎಚ್.ಎನ್. ಪಾಟೀಲ್, ೨೦೦೫, ಪು.ಸಂ.೧೬-೧೭).

**೨೦೦೧ರ ಸೆನ್ಸಸ್‌ದ ಪ್ರಕಾರ ಕೊಪ್ಪಳ ಜಿಲ್ಲೆಯ ಸಾಕ್ಷರತೆಯು ಅಂಕಿ ಅಂಶಗಳ ಪಟ್ಟಿ.**

| ಕ್ರ.ಸಂಖ್ಯೆ | ಜಿಲ್ಲೆ/ತಾಲೂಕು | ಒಟ್ಟು | | | ಗ್ರಾಮೀಣ | | | ನಗರ | | |
|---|---|---|---|---|---|---|---|---|---|---|
| | | ಒಟ್ಟು | ಪು | ಮ | ಒಟ್ಟು | ಪು | ಮ | ಒಟ್ಟು | ಪು | ಮ |
| ೧. | ಯಲಬುರ್ಗಾ | ೫೫.೬೩ | ೬೯.೯೩ | ೪೧.೨೮ | ೫೪.೯೯ | ೯.೩೪ | ೦.೫೯ | ೬೭.೮೭ | ೮೧.೧೪ | ೫೪.೫೩ |
| ೨. | ಕುಷ್ಟಗಿ | ೫೧.೬೨ | ೬೮.೦೬ | ೩೪.೯೩ | ೪೯.೨೯ | ೬೬.೩೭ | ೩೨.೦೨ | ೭೪.೫೪ | ೩೪.೪೬ | ೬೪.೧೫ |
| ೩. | ಗಂಗಾವತಿ | ೫೩.೯೩ | ೬೭.೧೭ | ೪೦.೭೮ | ೪೯.೫೫ | ೬೩.೪೭ | ೩೫.೮೪ | ೬೬.೭೨ | ೭೭.೭೮ | ೫೫.೪೩ |
| ೪. | ಕೊಪ್ಪಳ | ೫೮.೫೩ | ೭೧.೯೪ | ೪೪.೭೬ | ೫೪.೫೪ | ೬೯.೨೦ | ೩೯.೫೬ | ೭೩.೩೭ | ೮೨.೦೭ | ೬೪.೩೧ |
| ೫. | ಜಿಲ್ಲೆ | ೫೨.೦೨ | ೬೯.೧೫ | ೪೦.೭೬ | ೫೧.೯೮ | ೬೬.೮೮ | ೩೭.೦೨ | ೬೯.೭೯ | ೮೦.೦೯ | ೫೯೧.೧೮ |

ಆಧಾರ: ೨೦೦೧ರ ಜನಗಣತಿ ವರದಿ.

ಈ ಮೇಲಿನ ಕೋಷ್ಟಕದಲ್ಲಿರುವಂತೆ ಕೊಪ್ಪಳ ಜಿಲ್ಲೆಯ ಒಟ್ಟು ಸಾಕ್ಷರತೆ ಪ್ರಮಾಣ ೫೨.೦೨ಶೇ ಇದ್ದು ರಾಜ್ಯ ಮಟ್ಟದ ಸಾಕ್ಷರತೆ ಪ್ರಮಾಣಕ್ಕಿಂತ (೬೭.೦೪ಶೇ) ಬಹಳ ಕಡಿಮೆಯಿದೆ. ಒಟ್ಟು ಮಹಿಳೆಯರ ಸಾಕ್ಷರತೆ ೪೦.೭೬ಶೇ ರಷ್ಟಿದ್ದು, ಗ್ರಾಮೀಣ ಪ್ರದೇಶದ ಮಹಿಳೆಯರ ಸಾಕ್ಷರತೆ ಕೇವಲ ೩೭.೦೨ಶೇ ತಾಲೂಕುಗಳನ್ನು ಗಮನಕ್ಕೆ ತಗೆದುಕೊಂಡರೆ ಕನಿಷ್ಟ ಸಾಕ್ಷರತೆ ೫೧.೬೨ಶೇ ಕುಷ್ಟಗಿ ತಾಲೂಕಿನಲ್ಲಿದ್ದರೆ, ಉನ್ನತ ಮಟ್ಟದ ಸಾಕ್ಷರತೆ ೫೮.೫೩ಶೇ ಕೊಪ್ಪಳ ತಾಲೂಕಿನಲ್ಲಿದೆ. ಕುಷ್ಟಗಿ ತಾಲೂಕಿನ ಮಹಿಳೆಯರ ಸಾಕ್ಷರತೆ ಕೇವಲ ೩೪.೯೩ಶೇ ರಷ್ಟಿದೆ. (ಪ್ರೊ. ಅಲ್ಲಮಪ್ರಭು, ಬೆಟ್ಟದೂರು, ಶ್ರೀ. ಎಚ್.ಎನ್. ಪಾಟೀಲ್, ೨೦೦೫, ಪು.ಸಂ.೬೧).

೨೦೦೧ರಲ್ಲಿ ನಡೆಸಿದ ಮಕ್ಕಳ ಜನಗಣತಿ ಪ್ರಕಾರ ಕೊಪ್ಪಳ ಜಿಲ್ಲೆಯಲ್ಲಿರುವ ೦-೬ ವಯೋಮಾನದ ಒಟ್ಟು ಮಕ್ಕಳ ಸಂಖ್ಯೆ ೧೯೮.೬೧೫ ಅದರಲ್ಲಿ ಹುಡುಗರ ಸಂಖ್ಯೆ ೧೦೨.೪೮೧ ಹುಡುಗಿಯರ ಸಂಖ್ಯೆ ೯೬,೧೩೪ ೦-೬ ರ ಒಳಗಿನ ಮಕ್ಕಳ ಸಾಕ್ಷರತೆಯು ೫೫.೦೨ರಷ್ಟಿದೆ. ಇದರಲ್ಲಿ ಹುಡುಗರ ಸಾಕ್ಷರತೆ ಪ್ರಮಾಣ ೬೯.೧೫ ಹುಡುಗಿಯರ ಸಾಕ್ಷರತೆ ಪ್ರಮಾಣವು ೪೦.೭೬ರಷ್ಟಿದೆ.(ಜಿಲ್ಲಾ ಪಂಚಾಯತಿ ೨೦೦೪-೨೦೦೫ ನೇ ಸಾಲಿನ ಅಂಕಿ ಅಂಶಗಳ ಮಾಹಿತಿ)

ವ್ಯಾಪಕವಾದ ಅನಕ್ಷರತೆ ಕೊಪ್ಪಳ ಜಿಲ್ಲೆಯ ಪ್ರಮುಖ ಸಮಸ್ಯೆಯಾಗಿದೆ. ಮಹಿಳಾ ಸಾಕ್ಷರತೆ ೩೯.೬ ಇದೆ. ಪೂರ್ವ ಪ್ರಾಥಮಿಕ ಶಿಕ್ಷಣ ಇನ್ನೂ ಶೈಶವಸ್ಥೆಯಲ್ಲಿದೆ. ಪ್ರಾಥಮಿಕ ಶಿಕ್ಷಣ ಇನ್ನೂ ಸಾರ್ವತ್ರೀಕರಣಗೊಂಡಿಲ್ಲ. ಪ್ರಾಥಮಿಕ ಶಿಕ್ಷಣದ ದಾಖಲಾತಿ ಇನ್ನೂ ತೃಪ್ತಿಕರ ಮಟ್ಟಕ್ಕೆ ತಲುಪಬೇಕಾಗಿದೆ. ಈ ಜಿಲ್ಲೆಯಲ್ಲಿ ೬ ರಿಂದ ೧೪ ವಯಸ್ಸಿನ ೧೫೧೨೦ ಮಕ್ಕಳು ಶಾಲೆಯಿಂದ ಹೊರಗುಳಿದಿದ್ದಾರೆ. ಶಾಲಾ ಶಿಕ್ಷಣ ಮಧ್ಯಂತರದಲ್ಲಿ ಬಿಡುವ (Drop-out) ಪ್ರಮಾಣ ಅತ್ಯಂತ ಹೆಚ್ಚಾಗಿದೆ. ಒಂದನೇ ತರಗತಿಗೆ ದಾಖಲಾಗುವ ಮಕ್ಕಳು ೧,೭೫,೬೪೧ ಮಕ್ಕಳು ಎಂಟನೇ ತರಗತಿ ಬರುವಷ್ಟರಲ್ಲಿ ೩೦,೮೦೦ ಇಳಿದಿರುತ್ತವೆ, ಅಂದರೆ ೧,೪೪,೮೪೧ ಮಕ್ಕಳು ಪ್ರಾಥಮಿಕ ಶಿಕ್ಷಣ ಮುಗಿಸುವ ಮೊದಲೇ ಶಾಲೆಬಿಡುವರು. ರಾಜ್ಯಮಟ್ಟದಲ್ಲೇ ಅತ್ಯಂತ ಹೆಚ್ಚು ಪ್ರಮಾಣದಲ್ಲಿ ಮಧ್ಯದಲ್ಲಿಯೆ ಶಾಲೆ ಬಿಡುವ ಮಕ್ಕಳ ಸಂಖ್ಯೆಯಲ್ಲಿ ಮೊದಲು ಮೂರು ಜಿಲ್ಲೆಯಲ್ಲಿ ಕೊಪ್ಪಳ ಜಿಲ್ಲೆಯು ಒಂದಾಗಿದೆ. ಈ ಜಿಲ್ಲೆಯ ಪ್ರಾಥಮಿಕ ಶಾಲೆಗಳು ಮೂಲಭೂತ ಸೌಲಭ್ಯಗಳ ದೃಷ್ಟಿಯಿಂದ ಇನ್ನೂ ತೃಪ್ತಿಕರ ಹಂತ ಮುಟ್ಟಬೇಕಾಗಿದೆ. ಜಿಲ್ಲೆಯಲ್ಲಿ ೫೦೦ ಕ್ಕೂ ಹೆಚ್ಚು ಪ್ರಾಥಮಿಕ ಶಾಲಾ ಶಿಕ್ಷಕರ ಕೊರತೆ ಇದೆ.

ಕೊಪ್ಪಳ ಜಿಲ್ಲೆಯ ಶೈಕ್ಷಣಿಕ ಸಮಸ್ಯೆ ನಿವಾರಿಸಲು ಹಲವಾರು ಕ್ರಮಗಳನ್ನು ಕೈಗೊಳ್ಳಲಾಗಿದೆ. ಸರ್ಕಾರವು ಹಲವಾರು ಕ್ರಮಗಳನ್ನು ಕೈಗೊಂಡಿದೆ. ಸಾಕ್ಷರತಾ ಆಂಧೋಲನವನ್ನು ಆರಂಭಿಸಿ ಚುರುಕುಗೊಳಿಸಿದೆ. ಪ್ರಾಥಮಿಕ ಶಾಲೆಗಳಲ್ಲಿ ಮಕ್ಕಳ ದಾಖಲಾತಿ ಹೆಚ್ಚಳ, ಮಧ್ಯದಲ್ಲೇ ಶಾಲೆ ಬಿಡುವರ ಹಾಗೂ ಶಾಲೆಯಿಂದ ಹೊರಗುಳಿದ ಮಕ್ಕಳ ಸೇರ್ಪಡೆಗಾಗಿ ಸರಕಾರದ ಕ್ರಮಗಳು ಜಾರಿಯಲ್ಲಿ ಬರುತ್ತಿವೆ. (ಪ್ರೊ. ಅಲ್ಲಮಪ್ರಭು ಬೆಟ್ಟದೂರು, ಶ್ರೀ ಪಾಟೀಲ್ ಎಚ್.ಎಸ್, ೨೦೦೫,ಪು.ಸಂ.೧೭-೧೮).

ಶಾಲೆಯಿಂದ ಹೊರಗುಳಿದ ೬ ರಿಂದ ೧೪ ವರ್ಷದ ೭,೮೯೯ ಮಕ್ಕಳನ್ನು ೩೨೦ ಚಿಣ್ಣರ ಅಂಗಳ ಕೇಂದ್ರಗಳ ಮೂಲಕ ಶಿಕ್ಷಣವಾಹಿನಿಗೆ ತರಲಾಯಿತು. 'ಬಾ ಮರಳಿ ಶಾಲೆಗೆ' ಕಾರ್ಯಕ್ರಮದ ಮೂಲಕ ಜನಜಾಗೃತಿ ಗೊಳಿಸಿ ೫,೮೫೦ ಮಕ್ಕಳನ್ನು ಶಾಲೆಗೆ ಮರಳಿ ತರಲಾಗಿದೆ.

'ಕೂಲಿಯಿಂದ ಶಾಲೆಗೆ', 'ಬೀದಿಯಿಂದ ಶಾಲೆಗೆ', 'ಬಾ ಬಾಲೆ ಶಾಲೆಗೆ' ಕಾರ್ಯಕ್ರಮಗಳ ಮೂಲಕ ಕೂಲಿಮಕ್ಕಳನ್ನು, ಬೀದಿಮಕ್ಕಳನ್ನು, ಬಾಲಕಿಯರನ್ನು ಶಿಕ್ಷಣಕ್ಕೆ ಸೇರ್ಪಡೆ ಗೊಳಿಸಲಾಗಿದೆ. ೨೦೧೦ ರೊಳಗಾಗಿ ೧೪ ವರ್ಷದೊಳಗಿನ ಎಲ್ಲಾ ಮಕ್ಕಳು ೮ ವರ್ಷಗಳ ಪ್ರಾಥಮಿಕ ಶಿಕ್ಷಣ ಮುಗಿಸುವಂತಾಗ ಬೇಕೆಂದು ಅಂಧಾಜು ಮಾಡಲಾಗಿದೆ. ಆದರೆ ಈ ಗುರಿ ಎಷ್ಟರ ಮಟ್ಟಿಗೆ ಇಡೇರುತ್ತದೆಯೆಂಬುದು ತಿಳಿಯದು. (ಪ್ರೊ. ಅಲ್ಲಮಪ್ರಭು ಬೆಟ್ಟದೂರು, ಶ್ರೀ ಪಾಟೀಲ್ ಎಚ್.ಎಸ್, ೨೦೦೫,ಪು.ಸಂ.೨೦).

೨೦೦೪-೦೫ ನೇ ಸಾಲಿನ ಕೊಪ್ಪಳ ಜಿಲ್ಲೆಯ ಸರ್ಕಾರಿ ಪ್ರಾಥಮಿಕ ಶಿಕ್ಷಣದ ಅಂಕಿ ಅಂಶಗಳ ಮಾಹಿತಿ.

| ಕ್ರ.ಸಂ | ತಾಲೂಕ | ಪ್ರಾಥಮಿಕ ಶಾಲೆಯ ಸಂಖ್ಯೆ | ವಿಧ್ಯಾರ್ಥಿಗಳ ಸಂಖ್ಯೆ | ಪ.ಜಾತಿ | | | ಪ.ಪಂಗಡ | | | ಅಲ್ಪ ಸಂಖ್ಯಾತರು | | | ಇತರೆ | | |
|---|---|---|---|---|---|---|---|---|---|---|---|---|---|---|---|
| | | | | ಹು | ಹುಡುಗಿ | ಒಟ್ಟು | ಹು | ಹುಡುಗಿ | ಒಟ್ಟು | ಹು | ಹುಡುಗಿ | ಒಟ್ಟು | ಹು | ಹುಡುಗಿ | ಒಟ್ಟು |
| ೧ | | | | | | | | | | | | | | | |
| ೨ | ಗಂಗಾವತಿ | ೮೦ | ೫೭೩೬೩ | ೬೩೯೨ | ೬೩೯೨ | ೧೭೮೦೦ | ೫೫೯೩ | ೪೭೮೩ | ೧೦೩೭೫ | ೫೭೮ | ೫೯೬ | ೧೧೭೪ | ೬೯೫೧ | ೧೭೦೫೩ | ೩೪೦೦೪ |
| ೩ | ಕೊಪ್ಪಳ | ೨೧೧ | ೫೧೦೨೨ | ೫೪೪೭ | ೫೪೪೭ | ೧೦೨೯೦ | ೫೫೫೮ | ೨೩೯೩ | ೭೯೫೧ | ೫೨೮ | ೩೯೬ | ೯೨೪ | ೧೧೯೪೮ | ೧೯೯೦೯ | ೩೧೮೫೭ |
| ೪ | ಕುಷ್ಟಗಿ | ೨೦೩ | ೪೦೮೨೩ | ೩೨೮೪ | ೩೨೮೪ | ೬೦೮೧ | ೩೨೮೩ | ೨೭೯೮ | ೬೦೪೧ | ೨೧೪ | ೩೯೮ | ೬೧೨ | ೧೫೦೧೬ | ೧೩೦೭೩ | ೨೮೦೮೯ |
| ೫ | ಯಲಬುರ್ಗಾ | ೧೮೨ | ೩೯೮೨೩ | ೪೨೩೨ | ೪೨೩೨ | ೭೭೫೩ | ೩೧೦೯ | ೨೧೦೫ | ೫೨೧೪ | ೧೨೧ | ೧೭೨ | ೨೯೩ | ೧೩೬೫೧ | ೧೨೯೧೨ | ೨೬೫೬೩ |
| | ಒಟ್ಟು ಜಿಲ್ಲೆಗಳು | ೮೭೬ | ೧೮೯೦೩೧ | ೧೯೩೫೫ | ೧೯೩೫೫ | ೩೫೯೩೩ | ೧೭೫೪೩ | ೧೨೦೩೯ | ೨೯೫೮೨ | ೧೪೪೧ | ೧೫೬೨ | ೩೦೦೩ | ೫೭೫೬೬ | ೬೨೯೪೭ | ೧೨೦೫೧೩ |

| ಕ್ರ. ಸಂಖ್ಯೆ | ತಾಲೂಕು | ಒಟ್ಟು | | |
|---|---|---|---|---|
| | | ಹುಡುಗ | ಹುಡುಗಿ | ಒಟ್ಟು |
| ೧ | ಗಂಗಾವತಿ | ೨೯೫೧೪ | ೨೭೮೪೯ | ೫೭೩೬೩ |
| ೨ | ಕೊಪ್ಪಳಾ | ೨೩೪೮೧ | ೨೭೫೪೧ | ೫೧೦೨೨ |
| ೩ | ಕುಷ್ಟಗಿ | ೨೧೭೯೭ | ೧೯೦೨೬ | ೪೦೮೨೩ |
| ೪ | ಯಲ್ಬುರ್ಗಾ | ೨೧೧೧೩ | ೧೮೭೧೦ | ೩೯೮೨೩ |
| ೫ | ಒಟ್ಟು ತಾಲೂಕು | ೯೫೯೦೫ | ೯೩೧೨೬ | ೧೮೯೦೩೧ |

ಮೂಲ : ಜಿಲ್ಲಾ ಪಂಚಾಯತ ಕೊಪ್ಪಳ ೨೦೦೪-೦೫ರ ಪ್ರಾಥಮಿಕ ಶಿಕ್ಷಣದ ಅಂಕಿ ಅಂಶಗಳವರದಿ

೨೦೦೪-೦೫ ರ ಸರಕಾರಿ ಪ್ರಾಥಮಿಕ ಶಾಲೆ ಅಂಕಿಅಂಶಗಳ ಪಟ್ಟಿಯ ವಿಶ್ಲೇಷಣೆಯನ್ನು ಗಮನಿಸಿದಾಗ, ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನಲ್ಲಿ ಹೆಚ್ಚು ಪ್ರಾಥಮಿಕ ಶಾಲೆಗಳಿದ್ದು ಯಲ್ಬುರ್ಗಾದಲ್ಲಿ ಪ್ರಾಥಮಿಕ ಶಾಲೆಗಳ ಸಂಖ್ಯೆಯು ಕಡಿಮೆ ಇದೆ ಶಾಲೆಗೆ ದಾಖಲಾದ ಒಟ್ಟು ಮಕ್ಕಳಲ್ಲಿ ಪರಿಶಿಷ್ಟ ಪಂಗಡ ಹಾಗು ಅಲ್ಪ ಸಂಖ್ಯಾತರಲ್ಲಿ ದಾಖಲಾದ ಮಕ್ಕಳಸಂಖ್ಯೆ ಕಡಿಮೆ ಇದೆ, ಆದರಲ್ಲಿ ಹುಡುಗರ ಪ್ರಮಾಣವನ್ನು ಗಮನಿಸಿದರೆ ಹುಡಿಗಿಯರ ಪ್ರಮಾಣ ಕ್ಕಿಂತ ಹೆಚ್ಚಿದೆ. ಪ್ರಾಥಮಿಕ ಶಾಲೆಗೆ ದಾಖಲಾದ ಹೆಣ್ಣು ಮಕ್ಕಳಲ್ಲಿ ಹೆಣ್ಣುಮಕ್ಕಳಸಂಖ್ಯೆ ಬಹಳ ಕಡಿಮೆ ಪ್ರಮಾಣದಲ್ಲಿದೆ ಎಂಬುದು ಗಮನಿಸಬಹುದು.

### ಗಂಗಾವತಿ ತಾಲೂಕಿನ ಶೈಕ್ಷಣಿಕ ಸ್ಥಿತಿ

ಕೊಪ್ಪಳ ಜಿಲ್ಲೆಯಲ್ಲಿ ಬರುವ ತಾಲುಕಿನಲ್ಲಿ ಗಂಗಾವತಿಯು ಒಂದಾಗಿದೆ. ಮೊದಲು ಗಂಗಾವತಿ ತಾಲೂಕು ರಾಯಚೂರು ಜಿಲ್ಲೆಯಲ್ಲಿಯೇ ಸೇರ್ಪಡೆಯಾಗಿತ್ತು. ೧೯೯೭ ರ ಆಗಷ್ಟ ೨೪ ರಂದು ಕೊಪ್ಪಳ ಜಿಲ್ಲೆಯು ಅಸಿತ್ವಕ್ಕೆ ಬಂದಾಗ ಗಂಗಾವತಿ ತಾಲೂಕು ಕೊಪ್ಪಳ ಜಿಲ್ಲೆಯಲ್ಲಿ ಸೇರಿಕೊಂಡಿತು.

ಗಂಗಾವತಿಯು ತಾಲೂಕಿನಲ್ಲಿ ನೀರಾವರಿಯ ಸೌಲಭ್ಯತೆ ಅತ್ಯಂತ ಉತ್ತಮವಾಗಿದ್ದು ಕೊಪ್ಪಳ ಜಿಲ್ಲೆಯಲ್ಲಿಯೇ ಗಂಗಾವತಿ ಮಾತ್ರ ನಿರಾವರಿ ಬೇಸಾಯ ಪದ್ದತಿಯನ್ನು ವಿಫಲವಾಗಿ ಹೊಂದಿವೆ. ಆದರೆ ಉಳಿದ ತಾಲೂಕುಗಳು ಒಣ ಬೇಸಾಯ ಪದ್ಧತಿಯನ್ನು ಹೊಂದಿವೆ ಕೊಪ್ಪಳ ಜಿಲ್ಲೆಯು ಹಿಂದುಳಿದ ಜಿಲ್ಲೆಯಾಗಿತ್ತು. ಆದರೆ ಗಂಗಾವತಿ ಮಾತ್ರ ಹಿಂದುಳಿದ ತಾಲೂಕಿನಲ್ಲಿ ಸೇರ್ಪಡೆಯಾಗಿತ್ತು ರಾಜ್ಯದ ೧೭೫ ತಾಲೂಕುಗಳ ಪೈಕಿ ಗಂಗಾವತಿ ತಾಲೂಕು ೮೧ ನೇ ಸ್ಥಾನಪಡೆದಿದೆ. ಆದರೆ ಕೊಪ್ಪಳವು ೧೩೨ ನೇ ಸ್ಥಾನ ಪಡೆದಿದೆ. (ಪ್ರೊ. ಅಲ್ಲಮಪ್ರಭು ಬೆಟ್ಟದೂರು, ಶ್ರೀ ಪಾಟೀಲ್ ಎಚ್.ಎಸ್, ೨೦೦೫,ಪು.ಸಂ.೫೩).

ಗಂಗಾವತಿ ತಾಲೂಕಿನ ಶೈಕ್ಷಣಿಕ ಸ್ಥಿತಿಯನ್ನು ತಿಳಿಯುವುದು ಅವಶ್ಯಕವಾಗಿದೆ ಏಕೆಂದರೆ ನನ್ನ ಅಧ್ಯಯನಕ್ಕೆ ಗಂಗಾವತಿ ತಾಲೂಕನ್ನು ಆಯ್ಕೆ ಮಾಡಿ ಕೊಂಡಿರುವುದರಿಂದ ಅತಿ ಅವಶ್ಯಕವಾಗಿದೆ. ಇಲ್ಲಿ ಒಟ್ಟು ೨೯೭ ಪ್ರಾಥಮಿಕ ಶಾಲೆಗಳಿದ್ದು ಇದರಲ್ಲಿ ಸರಕಾರಿ ಪ್ರಾಥಮಿಕ ಶಾಲೆಗಳು ೨೧೩ ಇದ್ದರೆ ೮೪ ಖಾಸಗಿ ಪ್ರಾಥಮಿಕ ಶಾಲೆಗಳಿವೆ.

೨೦೦೧ ರ ಸೆನ್ಸಸ್‌ರ ವರದಿ ಪ್ರಕಾರ ಗಂಗಾವತಿ ತಾಲೂಕಿನಲ್ಲಿ ಒಟ್ಟು ಸಾಕ್ಷರತೆಯ ಅಂಕಿ ಅಂಶಗಳ ವಿವರಣೆ.

| | ಒಟ್ಟು ಜನಸಂಖ್ಯೆ | ಅಕ್ಷರಸ್ಥರು | | | ಅನಕ್ಷರಸ್ಥರು | | |
|---|---|---|---|---|---|---|---|
| | | ಒಟ್ಟು | ಪುರುಷರು | ಮಹಿಳೆಯರು | ಒಟ್ಟು | ಪುರುಷರು | ಮಹಿಳೆಯರು |
| ಒಟ್ಟು | ೪೦೫೦೭೬ | ೧೮೨೮೮೯ | ೧೧೩೫೪೪ | ೬೯೩೪೫ | ೫೩.೯೩ | ೬೩.೪೭ | ೪೦.೭೮ |
| ಗ್ರಾಮೀಣ | ೩೦೩೬೭೬ | ೧೨೫೧೬೬ | ೭೯೫೬೪ | ೪೫೬೦೨ | ೪೯.೫೫ | ೭೭.೭೮ | ೩೫.೮೪ |
| ನಗರ | ೧೦೧೩೯೭ | ೫೭೭೨೩ | ೩೩೯೮೦ | ೨೩೭೪೩ | ೬೬.೭೨ | ೭೦.೯೪ | ೫೫.೪೩ |

ಮೂಲ: ೨೦೧೧ರ ಸೆನ್ಸಸ್ ಮತ್ತು ಅಭಿವೃದ್ಧಿ ಅಧ್ಯಯನ, ೨೦೦೫

ಈ ಮೇಲಿನ ಅಂಕಿ ಅಂಶಗಳ ಪಟ್ಟಿಯ ವಿವರಣೆಯನ್ನು ಗಮನಿಸಿದಾಗ ೨೦೦೧ ರ ಸೆನ್ಸಸ್ ಪ್ರಕಾರ ಗಂಗಾವತಿ ತಾಲೂಕಿನಲ್ಲಿ ಒಟ್ಟು ಜನಸಂಖ್ಯೆ ೪೦೫೦೭೬ ಇದ್ದು ಗ್ರಾಮಿಣ ಪ್ರದೇಶದಲ್ಲಿ ವಾಸವಾಗಿದವರ ಜನಸಂಖ್ಯೆ ೩೦೩೬೭೯ ಅದೇರೀತಿ ನಗರ ಪ್ರದೇಶದಲ್ಲಿ ವಾಸವಾಗಿದವರ ಜನಸಂಖ್ಯೆ ೧೦೧೩೯೭ ಇದೆ. ಅದೇರೀತಿ ಅನಕ್ಷರಸ್ಥರ ಸಂಖ್ಯೆ ೧೮೨೮೮೯ ಇದೆ. ಅದರಲ್ಲಿ ಪುರುಷರ ಸಂಖ್ಯೆ ೧೧೩೫೪೪ ಇದ್ದು ಮಹಿಳೆಯರ ಸಂಖ್ಯೆ ೬೯೩೪೫ ಇದೆ. ಅದೇರೀತಿ ಗಂಗಾವತಿ ತಾಲೂಕಿನಲ್ಲಿ ಒಟ್ಟು ಸಾಕ್ಷರಿರುವ ಜನರು ೫೩೯೩ ಇದ್ದು ಪುರುಷರ ಸಂಖ್ಯೆ ೬೭.೧೭ ಇದ್ದು ಮಹಿಳೆಯರ ಸಂಖ್ಯೆ ೪೦.೭೮ ರಷ್ಟಿದೆ.

ಗಂಗಾವತಿ ತಾಲೂಕಿನಲ್ಲಿ ಪ್ರಾಥಮಿಕ ಶಿಕ್ಷಣದ ಮಾಹಿತಿ (೨೦೦೬-೦೭) ಶಾಲಾಗಣತಿ ಮಕ್ಕಳ ಗಣತಿಯಿಂದ ೬-೧೩ ವರ್ಷದ ಒಟ್ಟು ಮಕ್ಕಳ ಸಂಖ್ಯೆ ೭೧,೦೪೫ ಇದೆ. ಅದರಲ್ಲಿ ಗಂಡು ಮಕ್ಕಳ ಸಂಖ್ಯೆ ೩೭,೨೩೭ಇದ್ದು ಹೆಣ್ಣು ಮಕ್ಕಳ ಸಂಖ್ಯೆ ೩೮,೮೩೮ ಇದೆ. ಅದರಲ್ಲಿ ಪ್ರತಿದಿನ ಶಾಲೆಗೆ ಹೋಗುವ ಒಟ್ಟು ಮಕ್ಕಳ ಸಂಖ್ಯೆ ೬೨,೬೩೩ ಮತ್ತು ಗಂಡು ಮಕ್ಕಳ ಸಂಖ್ಯೆ ೩೨,೯೭೯ ಇದ್ದರೆ ಹೆಣ್ಣು ಮಕ್ಕಳ ಸಂಖ್ಯೆ ೨೯,೬೫೪ ಇದೆ. ಶಾಲೆ ಬಿಟ್ಟ ಒಟ್ಟು ಮಕ್ಕಳ ಸಂಖ್ಯೆ ೭೦೧ ಇದೆ.

ಗಂಡು ಮಕ್ಕಳ ಸಂಖ್ಯೆ ೩೪೧ ಆದರೆ ಶಾಲೆ ಬಿಟ್ಟ ಹೆಣ್ಣು ಮಕ್ಕಳ ಸಂಖ್ಯೆ ೩೬೦ ಇದೆ. ಅದೇರೀತಿ ಇನ್ನೂ ಶಾಲೆಗೆ ದಾಖಲಾಗದ ಒಟ್ಟು ಮಕ್ಕಳ ಸಂಖ್ಯೆ ೩೫೧ ಇದ್ದರೆ ಗಂಡು ಮಕ್ಕಳ ಸಂಖ್ಯೆ ೧೭೯, ಹೆಣ್ಣು ಮಕ್ಕಳ ಸಂಖ್ಯೆ ೧೭೪ ರಷ್ಟಿದೆ. ಶಾಲೆಯಿಂದ ಹೊರಗುಳಿದ ಒಟ್ಟು ಮಕ್ಕಳ ಸಂಖ್ಯೆಯಲ್ಲಿ ೧೦೫೨ ರಷ್ಟಿದೆ. ಅದರಲ್ಲಿ ಗಂಡು ಮಕ್ಕಳ ಸಂಖ್ಯೆ ೫೧೮ ಇದೆ. ಹೆಣ್ಣು ಮಕ್ಕಳ ಸಂಖ್ಯೆ ೫೩೪ ರಷ್ಟಿದೆ. ಮಧ್ಯದಲ್ಲಿ ಶಾಲೆ ಬಿಡುವ ಮಕ್ಕಳಲ್ಲಿ ಹೆಣ್ಣು ಮಕ್ಕಳ ಸಂಖ್ಯೆ ಹೆಚ್ಚಾಗಿದೆ.

**೨೦೦೬ರ ಮಕ್ಕಳ ಸಮೀಕ್ಷೆಯು ೬ ರಿಂದ ೧೪ ವಯೋಮಾನದ ಶಾಲೆಯಿಂದ ಹೊರಗುಳಿದ ಮಕ್ಕಳ ವಿವರ.**

| ಕ್ರ.ಸಂ | ಜಿಲ್ಲೆ | ತಾಲೂಕು | ೬-೧೪ ವಯೋಮಾನದ ಮಕ್ಕಳ ಸಂಖ್ಯೆ | | | ಶಾಲೆಗೆ ಧಾಖಲಾದವರು | | | ಶಾಲೆ ಬಿಟ್ಟವರು | | | ಶಾಲೆಯಿಂದ ಹೊರಗುಳಿದವರು | | |
|---|---|---|---|---|---|---|---|---|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ | ಕೊಪ್ಪಳ | ಗಂಗಾವತಿ | ೩೦೧೧೫ | ೨೮೪೩೧ | ೫೯೫೪೬ | ೧೬೯ | ೧೯೩ | ೩೬೨ | ೩೧೩ | ೩೮೦ | ೬೯೩ | ೪೮೨ | ೫೭೩ | ೧೦೫೫ |
| ೨ | | ಕೊಪ್ಪಳ | ೨೭೦೩೨ | ೨೪೮೪೫ | ೫೧೮೭೭ | ೯೪ | ೧೪೮ | ೨೪೨ | ೫೨೩ | ೫೮೩ | ೧೧೦೬ | ೬೧೭ | ೭೩೧ | ೧೩೪೮ |
| ೩ | | ಕುಷ್ಟಗಿ | [illegible] | [illegible] | ೩೪೫೩೫ | [illegible] | [illegible] | ೧೦೭ | ೨೫೧ | ೪೬ | [illegible] | ೪೩೭ | [illegible] | [illegible] |
| ೪ | | ಯಲಬುರ್ಗಾ | [illegible] | [illegible] | ೩೫೭೭೧ | [illegible] | [illegible] | ೧೩೦ | ೩೩೬ | [illegible] | [illegible] | ೩೫೨ | [illegible] | [illegible] |
| ೫ | ಒಟ್ಟು | | ೯೪೦೯೩ | ೮೬೬೩೫ | ೧೮೦೭೨೮ | ೩೯೯ | ೫೪೨ | ೯೪೧ | ೧೪೨೨ | ೧೭೩೭ | ೩೧೫೯ | ೧೮೨೧ | ೨೨೭೯ | ೪೧೦೦ |

ಮೂಲ : ಸಮಗ್ರ ಅಂಕಿ ಅಂಶ (೨೦೦೬)

೨೦೦೬ರ ಮಕ್ಕಳ ಸಮೀಕ್ಷೆಯ ೬ರಿಂದ ೧೪ ವಯೋಮಾನದ ಶಾಲೆಯಿಂದ ಹೊರಗುಳಿದ ಮಕ್ಕಳ ವಿವರದಪಟ್ಟಿಯನ್ನು ಅವಲೋಕಿಸಿದಾಗ ಕೊಪ್ಪಳ ಜಿಲ್ಲೆಯಲ್ಲಿ ೬-೧೪ ವಯೋಮಾನದ ಒಟ್ಟು ಗಂಡು ಮಕ್ಕಳ ಸಂಖ್ಯೆ ೯೪,೦೯೩ ಇದ್ದರೆ ಹೆಣ್ಣು ಮಕ್ಕಳ ಸಂಖ್ಯೆ ೮೬೬೩೫ಇದೆ.ಅದೇರೀತಿ ಶಾಲೆಗೆ ದಾಖಲಾದವರಲ್ಲಿ ಒಟ್ಟು ಗಂಡು ಮಕ್ಕಳ ಸಂಖ್ಯೆ ೩೯೯ ಇದ್ದರೆ ಹೆಣ್ಣು ಮಕ್ಕಳ ಸಂಖ್ಯೆ ೫೪೨ ಇದೆ. ಅದೇರಿತಿ ಶಾಲೆಬಿಟ್ಟವರಲ್ಲಿ ಒಟ್ಟು ಗಂಡು ಮಕ್ಕಳ ಸಂಖ್ಯೆ. ೧೪೨೨ ಇದ್ದರೆ ಬಿಟ್ಟ ಹೆಣ್ಣುಮಕ್ಕಳ ಸಂಖ್ಯೆ ೧೭೩೭ ಇದೆ. ಅದೇರಿತಿ ಶಾಲೆಯಿಂದ ಹೊರಗುಳಿದವರಲ್ಲಿ ಒಟ್ಟು ಗಂಡು ಮಕ್ಕಳ ಸಂಖ್ಯೆ ೧೮೨೧ ಇದ್ದರೆ ಹೆಣ್ಣು ಮಕ್ಕಳ ಸಂಖ್ಯೆ ೨೨೭೯ ಇದೆ.

ಒಟ್ಟಿನಲ್ಲಿ ಗಂಗಾವತಿ ತಾಲೂಕು ಆರ್ಥಿಕವಾಗಿ ಅಭಿವೃದ್ಧಿ ಹೊಂದಿದರೂ ಶೈಕ್ಷಣಿಕ ಮಟ್ಟ ಇನ್ನು ಸುಧಾರಿಸಬೇಕಾಗಿದೆ. ಶೈಕ್ಷಣಿಕ ಮಟ್ಟವನ್ನು ಸುಧಾರಿಸುವ ಸಲುವಾಗಿ ಹಲವಾರು ಯೋಜನೆಗಳು ಕ್ರಮಗಳು ಬಂದಿವೆ. ಆದರೂ ಅವು ಇನ್ನೂ ಹೆಚ್ಚು ಪ್ರಭಲವಾಗಬೇಕು, ಅಂದಾಗ ಶೈಕ್ಷಣಿಕ ಮಟ್ಟವನ್ನು ಸುಧಾರಿಸಬಹುದಾಗಿದೆ.

## ಉಲ್ಲೇಖಗಳು


೧. ಪ್ರೊ.ಅಲ್ಲಮಪ್ರಭು,ಬೆಟ್ಟದೂರು,ಪಾಟಿಲ್ ಹೆಚ್.ಎಸ್.,೨೦೦೫, ಗುಲ್ಬರ್ಗಾ ವಿಶ್ವವಿಧ್ಯಾನಿಲಯ,ಗುಲ್ಬರ್ಗಾ,ಪ್ರಸಾರಂಗ.

೨. ಡಾ.ಕೃಷ್ಣಕುಮಾರ್.ಸಿ.ಪಿ, ಪ್ರೊ.ಶಿವರಾಮು ಕಾಡನುಕುಪ್ಪೆ, 2001, ಸುವರ್ಣ ಶಿಕ್ಷಣ, ಮೈಸೂರು, ವಿದ್ಯಾವರ್ತಕ ಸಂಘ.

೩. ಜಿಲ್ಲಾಪಂಚಾಯಿತಿ ಕೊಪ್ಪಳ ೨೦೦೪-೨೦೦೫ನೇ ಸಾಲಿನ ಅಂಕಿ ಅಂಶಗಳ ಮಾಹಿತಿ.

೪. ಡಾ.ಪ್ರಶಾಂ ಹೆಚ್.ಡಿ.,ಡಾ.ಬೋರಲಿಂಗಯ್ಯಾ ಹಿ.ಚಿ.,ಕನ್ನಡ ವಿಶ್ವವಿಧ್ಯಾನಿಲಯ ಹಂಪಿ, ಪ್ರಸಾರಂಗ.

೫. ಮಹಮ್ಮದ್ ಕುಳಾಯಿ,ಶರ್ಫುದ್ದೀನ್ ಬಿ.ಎಸ್.,ಅಕ್ಬರಅಲಿ,೨೦೦೦, ಬೆಂಗಳೂರು,ಮುಸ್ಲಿಂ ಲೇಖಕರ ಸಂಘ.

೬. ಡಾ.ಲಿಡಿಯಾ ಫರ್ನಾಂಡಿಸ್,ಡಾ.ಆನಂದಿ ಮಾರ್ಟಿಸ್,ಡಾ.ಶಶಿಕಲಾ ಎ. , ೨೦೦೩, ಅನು:ಡಾ.ಶಶಿಕಲಾ ಎ.,ರಾಧಾಮಣಿ,ಡಾ.ಸಿ.ಎಸ್.ಸುನಿತಾ,ಆಧುನಿಕ ಶಿಕ್ಷಣ ಒಲವುಗಳು, ಮೈಸೂರು, ವಿಜಯಲಕ್ಷ್ಮಿ ಪ್ರಕಾಶನ.

೭. ಶ್ರೀಧರ ಎ.,ಡಾ.ಪ್ರಶಾಂತ ಹೆಚ್.ಡಿ.(ಸಂ),೨೦೦೬,ಅಭಿವೃದ್ಧಿ ಅಧ್ಯಯನ, ಸಮಾಜಿಕ ವಿಜ್ಞಾನ ಪತ್ರಿಕೆ, ಕನ್ನಡ ಹಂಪಿ ವಿಶ್ವವಿಧ್ಯಾನಿಲಯ, ಪ್ರಸಾರಂಗ.

೮. Shashidhar H.,Bangalore,Census of India ೨೦೦೧ series-೩೦ karnataka provisional population, kendriya saadana.

೯. ಸಮಗ್ರ ಅಂಕಿ ಅಂಶ (೨೦೦೬ರ).

## ಶಿಕ್ಷಣ ಹರಡುವಿಕೆಯಲ್ಲಿ ಧರ್ಮಗಳ ಪಾತ್ರ

ಶಿಕ್ಷಣ ಹರಡುವಿಕೆಯಲ್ಲಿ ಧರ್ಮಗಳ ಪಾತ್ರವು ಪ್ರಮುಖಾವಾಗಿದೆ. ಪ್ರತಿಯೊಂದು ಸಮುದಾಯದಲ್ಲಿ ಧಾರ್ಮಿಕ ಶಿಕ್ಷಣವನ್ನು ಅವಶ್ಯಕ ಮತ್ತು ಮೊದಲು ಕೊಡುವರು ಧರ್ಮವು ಅನೌಪಚಾರಿಕ ನಿಯೋಗಗಳಲ್ಲಿ ಬರುವ ಸಂಸ್ಥೆಗಳಲ್ಲಿ ಒಂದಾಗಿದೆ. ಪರೋಕ್ಷವಾಗಿ ಜನತೆಗೆ ಶಿಕ್ಷಣವನ್ನು ಒದಗಿಸಿಕೊಡುವ ಸಂಸ್ಥೆಗಳನ್ನು ಅನೌಪಚಾರಿಕ ಸಂಸ್ಥೆಗಳು ಎನ್ನುವರು. ಇದು ಸ್ವತಂತ್ರವಾದ ಸಂಸ್ಥೆ ಇಲ್ಲಿಯ ವ್ಯಕ್ತಿಯ ಜೀವನದುದ್ದಕ್ಕೂ ತಾವಾಗಿಯೇ ವಿವಿಧ ಅನುಭವಗಳ ಮೂಲಕ ಶಿಕ್ಷಣವನ್ನು ಪಡೆಯುತ್ತಾನೆ. ಇಂತಹ ಅನೌಪಚಾರಿಕ ನಿಯೋಗಗಳಲ್ಲಿ, ಧರ್ಮ, ಕುಟುಂಬ, ನೆರೆಹೊರೆ ಇತ್ಯಾದಿ ಸಂಸ್ಥೆಗಳು ಬರುತ್ತವೆ. ಕುಟುಂಬವು ಪ್ರತಿಯೊಬ್ಬ ಕುಟುಂಬದ ಸದಸ್ಯನಿಗೆ ಅನೌಪಚಾರಿಕ ಶಿಕ್ಷಣವನ್ನು ನಿಡುತ್ತದೆ. ಧಾರ್ಮಿಕ ವಿಚಾರ ಮತ್ತು ಆಚರಣೆಗಳು ತರಬೇತಿಗಳು, ದಯೆ, ಕರುಣೆ, ಅನುಕಂಪ, ತಾಳ್ಮೆ ಮತ್ತು ಒಳ್ಳೆಯ ಮನೋಭಾವನೆಯನ್ನು ಕಲಿಸುತ್ತದೆ.(ರೇಣುಕಪ್ಪ ಜಿ.ಎಸ್, ೨೦೦೪, ಪು.ಸಂ ೧೫೪)

ಅದೇರಿತಿ ಧರ್ಮವೂ ಸಹ ಅನೌಪಚಾರಿಕ ನಿಯೋಗವಾಗಿದ್ದು ಇದು ಕೇವಲ ಅನೌಪಚಾರಿಕ ಶಿಕ್ಷಣಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡುತ್ತದೆ. ಪ್ರಾಚೀನ ಕಾಲದಿಂದಲೂ ಧರ್ಮ ಹಾಗೂ ಶಿಕ್ಷಣಗಳ ನಡುವೆ ನಿಕಟವಾದ ಸಂಬಂಧ ಹೊಂದ್ದಿದ್ದು ಜೀವನದ ಪ್ರತಿಯೊಂದು ಕ್ಷೇತ್ರಗಳಲ್ಲಿಯೂ ಧರ್ಮ ಮಹತ್ವಪೂರ್ಣವಾದ ಪಾತ್ರವನ್ನು ವಹಿಸುತ್ತದೆ. ಶಿಕ್ಷಣದ ಪ್ರಮುಖವಾದ ಗುರಿ ಆತ್ಮ ಸಾಕ್ಷತ್ಕಾರವನ್ನು ಪಡೆಯುವುದಾಗಿದೆ. ಆದ್ದರಿಂದ ಶಿಕ್ಷಣಕ್ಕೆ ಧಾರ್ಮಿಕವಾದ ತಳಹದಿಯು ಅಗತ್ಯವಾಗಿದೆ. (ರೇಣುಕಪ್ಪ ಜಿ.ಎಸ್, ೨೦೦೪, ಪು.ಸಂ ೧೨೧).

ಪ್ರಾಚೀನ ಕಾಲದಲ್ಲಿ ಎಲ್ಲಾ ಶಿಕ್ಷಣಗಳು ಧಾರ್ಮಿಕವೇ ಆಗಿದ್ದವು ಧರ್ಮದ ಮುಖಂಡರೇ ಶಿಕ್ಷಣದ ಮೇಲೆ ಆಡಳಿತ ಮತ್ತು ನಿಯಂತ್ರಣವನ್ನು ಸಾಧಿಸುತ್ತಿದ್ದರು ಜ್ಞಾನದ ಪಾಲಕರು ಆಗಿದ್ದರು. ಪ್ರಾಚೀನ ಭಾರತ ಶಿಕ್ಷಣದ ಉದ್ದೇಶವು ಈ ಪ್ರಾಪಂಚಿಕ ಬದುಕಿಗಷ್ಟೇ ಅಲ್ಲದೆ ಆತ್ಮಸಾಕ್ಷಾತ್ಕರ ಮತ್ತು ಶಾಶ್ವತವಾದ ಮುಕ್ತಿಗಾಗಿ ಆಗಿದೆ. ಶಿಕ್ಷಣದ ಉದ್ದೇಶವು ನೈತಿಕ, ಧಾರ್ಮಿಕ ಮತ್ತು ಅಧ್ಯಾತ್ಮಿಕ ಸ್ವಭಾವವನ್ನು ಹೊಂದಿತ್ತು, ಸಮಾಜದ ಎಲ್ಲಾ ವರ್ಗಗಳಿಗೂ ಶಿಕ್ಷಣವು ಮುಕ್ತವಾಗಿಲ್ಲ ಕೆಲವೇ

ಜಾತಿ ಜನರಿಗೆ ಮಾತ್ರ ಸೀಮಿತವಾಗಿತ್ತು. ಕ್ರಮೇಣ ಇತರ ಜಾತಿಯವರಿಗೂ ವಿಸ್ತರಿಸಲಾಯಿತು.(ರೆಹೆಮತ್ ತರಕೇರಿ, ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ:೩, ಪು.ಸಂ.೩೪೬)

ಮಹ್ಮದರ ಕಾಲದಲ್ಲಿ ಮುಸ್ಲಿಂ ಧರ್ಮದಲ್ಲಿ ಎಲ್ಲಾ ಸ್ತ್ರೀ ಪುರುಷರಿಗೆ ಜ್ಞಾನಾರ್ಜನೆಯು ಕಡ್ಡಾಯ ಎಂದು ಕುರಾನ್ ವಿಧಿಸುತ್ತದೆ. ಮಹ್ಮದ್ ಪೈಗಂಬರು ಸಹ ಶಿಕ್ಷಣಕ್ಕೆ ಹೆಚ್ಚಿನ ಮಾನ್ಯತೆಯನ್ನು ಕೊಟ್ಟು ಸೂಕ್ತ ಮಾರ್ಗಗಳಿಂದ ಜ್ಞಾನವನ್ನು ಸಂಪಾದಿಸಿ ಕೊಳ್ಳಬೇಕೆಂದು ಅನುಯಾಯಿಗಳಿಗೆ ಪ್ರೇರಣೆ ನೀಡಿದರು, ತಮ್ಮ ಹೆಂಡತಿ ಮತ್ತು  ಮಗಳಿಗೂ ಶಿಕ್ಷಣದ ಅವಕಾಶವನ್ನು ನೀಡಿದ್ದರು.

ಇಸ್ಲಾಮ್ ಧರ್ಮದಲ್ಲಿ ಶಿಕ್ಷಣದ ಮೂಲ ಉದ್ದೇಶ ಬದುಕು ಮತ್ತು ಸಾವಿನ ನಂತರ ಬದುಕಿಗಾಗಿ ಸಿದ್ಧತೆಯೇ ಅಲ್ಲದೆ ಆತ್ಮಶುದ್ಧಿಯ ಶಿಕ್ಷಣ ಅಂದಿನ ಶಿಕ್ಷಣವು ಧರ್ಮದ ಒಂದು ಅವಿಭಾಜ್ಯ ಅಂಗವಾಗಿದ್ದು ಧಾರ್ಮಿಕ ಮುಖಂಡರಾದ ಉಲೇಮಾಗಳ ಕೈಯಲ್ಲೇಯೇ ಇತ್ತು. ಶಿಕ್ಷಣ ಸಂಸ್ಥೆಗಳು ಮಸೀದಿಗಳೊಂದಿಗೆ ವಿಲಿನಗೊಂಡಿದ್ದವು. ಮುಸ್ಲಿಮರ ಶಿಕ್ಷಣವನ್ನು 'ಮುಕ್ತಾಬ್' ಮತ್ತು 'ಮದ್ರಾಸ' ಎಂಬ ಸಂಸ್ಥೆಗಳ ಮೂಲಕವೇ ನೀಡಲಾಗುತ್ತಿತ್ತು. (ರೆಹೆಮತ್ ತರಕೇರಿ, 2009 ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ:೩, ಪು.ಸಂ.೩೪೬)

'ಮುಕ್ತಾಬ್' ಎಂದರೆ ವಿಷಯ ಬರೆಯುವಸ್ಥಳವೆಂದು ಅರ್ಥೈಯಿಸಿದರು ಇಲ್ಲಿ ಕುರಾನನ್ನು ಭೋದಿಸಿ ಅದರಲ್ಲಿರುವ ಮೂಲಭೂತವಾದ ತತ್ವಗಳನ್ನು ತಿಳಿಸುವುದಾಗಿತ್ತು, ಪ್ರಾಥಮಿಕ ಶಿಕ್ಷಣ ಕೊಡುವ ಕೇಂದ್ರ ಕುರಾನಿನ ಶಾಲೆ ಎಂತಲೂ ಕರೆಯಲಾಗುತ್ತಿತ್ತು. ಇದು ಮಸೀದಿಯೊಂದಿಗೆ ಸೇರ್ಪಡೆಯಾಗಿತ್ತು 'ಮದರಸಾ'ದಲ್ಲಿ ಉನ್ನತ ಶಿಕ್ಷಣಕ್ಕೆ ಹೆಚ್ಚು  ಮಿಸಲಾಗಿತ್ತು ಇಲ್ಲಿ ಅರೇಬಿಕ್ ಸಾಹಿತ್ಯ, ಧರ್ಮ, ತತ್ವಶಾಸ್ತ್ರ, ಚರಿತ್ರೆ, ಅರ್ಥಶಾಸ್ತ್ರ, ವ್ಯಾಕರಣ, ಕುರಾನನ್ನು ಬಾಯಿಪಾಟಮಾಡುವುದು ಮುಂತಾದವು ಕಲಿಯಲು ಅವಕಾಶ  ಕೊಡಲಾಗಿತ್ತು.

ಭಾಷೆ, ಸಾಹಿತ್ಯ ವಿಷಯಗಳೊಂದಿಗೆ ಮಕ್ಕಳಲ್ಲಿ ನೈತಿಕ ಶಿಕ್ಷಣ ಕೊಡುತ್ತಾ ನೈತಿಕತೆ ಬೆಳೆಸುತ್ತಾ ಜೊತೆಗೆ ಧರ್ಮವನ್ನು ಬಿಡದೆ ಭೋದಿಸುವ ಕಟ್ಟು ನಿಟ್ಟಾದ ವ್ಯವಸ್ಥೆ  ಮಾಡಲಾಗಿತ್ತು. ಮಹ್ಮದರು ಧರ್ಮದ ಮೂಲಕವೇ ಜ್ಞಾನ ತುಂಬಬೇಕು ಧರ್ಮ ಮತ್ತು ಶಿಕ್ಷಣ ಅವಿನಾವಭಾವ ಸಂಬಂಧದೊಂದಿಗೆ ಭೋದಿಸಬೇಕು ಎಂದು ಸಾರಿದರು ಆದರೆ ಇವರ ವಿಚಾರ ಪ್ರಸ್ತುತ ದಿನದಲ್ಲಿ ಸಮಂಜಿಸುವುದಿಲ್ಲ. (ಓಬಳೇಶ್ ಘಟ್ಟಿ,೧೯೯೨, ಪು.ಸಂ.೮೨).

ಅಕ್ಬರನ ಅಡಳಿತದ ಕಾಲದಲ್ಲಿ ಶೈಕ್ಷಣಿಕ ವ್ಯವಸ್ಥೆಯಲ್ಲಿ ಪರಿಣಾಮಕಾರಿಯಾದ ಬದಲಾವಣೆಗಳಾದವು ಧಾರ್ಮಿಕ ಮತ್ತು ಜಾತ್ಯಾತೀತ ಶಿಕ್ಷಣದ ಜೋತೆಗೂಡಿಸಲಾಗಿತ್ತು ಶಿಕ್ಷಣದ ಬಗ್ಗೆ ಇವರ ಅಭಿಪ್ರಾಯ ತೀವ್ರಧಾರ್ಮಿಕತೆಯಿಂದಾದ ಶುದ್ಧ ಜಾತ್ಯಾತೀತತೆಯತ್ತ ಕೊಂಡೊಯ್ಯುವುದೇ ಆಗಿತ್ತು. ಆದರೆ ಈ ಕಾರ್ಯದಲ್ಲಿ ಅವರು ಪೂರ್ಣವಾಗಿ ಯಶಸ್ವಿಯಾಗಲಿಲ್ಲ ಬ್ರಿಟೀಷರ ಆಗ ಮನದಿಂದ ಆಂಗ್ಲ ಶಿಕ್ಷಣವು ತಮ್ಮ ಯುವಕರನ್ನು ಕ್ರೈಸ್ತರನ್ನಾಗಿ ಅಥವಾ ನಾಸ್ತಿಕರನ್ನಾಗಿಸುತ್ತದೆ. ಈ ತಪ್ಪು ಗ್ರಹಿಕೆಯಿಂದ ಇಂಗ್ಲೀಷ ಶಿಕ್ಷಣವನ್ನು ಪಡೆಯಲು ಹಿಂಜರಿದರು.(ರೆಹೆಮತ್ ತರಕೇರಿ, ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ:೩, ಪು.ಸಂ.೩೪೬).

ಮಹ್ಮದರು ``ಪ್ರತಿಯೊಬ್ಬ ಮುಸ್ಲಿಂ ಸ್ತ್ರೀ ಪುರಷರಿಗು ಜ್ಞಾನಾರ್ಜನೆಯ ಅವಶ್ಯಕವಾಗಿದ್ದು ಗಂಡು ಅಥವ ಹೆಣ್ಣು ಮಕ್ಕಳಿಗೆ ಉತ್ತಮ ಶಿಕ್ಷಣ ಮತ್ತು ತರಗತಿಯನ್ನು ಕೊಡದೇ ಒಬ್ಬ ತಂದೆಯು ಕೊಡಬಹುದಾದ ಉತ್ತಮ ಬಳುವಳಿ ದೂರದ ಚೀನಾಕ್ಕೆ ಹೋಗಿಯಾದರು ಸರಿ ಮುಸ್ಲಿಮರು ಶಿಕ್ಷಣವನ್ನು ಹೊಂದಲೇಬೇಕು.`` (ಮಹ್ಮದ್ ಕುಳಾಯಿ, ಶರ್ಪುದ್ದಿನ್ ಬಿ.ಎನ್, ಅಕ್ಬರ್ ಅಲಿ, ೨೦೦೦, ೬೪-೬೫) ಎಂದು ಸಾರಿದರು. ಇವರ ಅಭಿಪ್ರಾಯವನ್ನು ನೋಡಿದರೆ ಇವರು ಸ್ತ್ರೀ ಮತ್ತು ಪುರುಷರಿಬ್ಬರಿಗೂ ಶಿಕ್ಷಣ ಪಡೆದುಕೊಳ್ಳಲು ಪ್ರೋತ್ಸಾಹ ನೀಡಿದ್ದರು, ಆದರೆ ಅವರು ಪ್ರೋತ್ಸಾಹ ನೀಡಿರುವ ಶಿಕ್ಷಣ ಧಾರ್ಮಿಕ ಶಿಕ್ಷಣವಾಗಿತ್ತು. (ರೆಹೆಮತ್ ತರಕೇರಿ,೨೦೦೦ ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ:೩, ಪು.ಸಂ.೩೪೭).

೨೦ನೇಯ ಶತಮಾನದ ಆರಂಭದ ವೇಳೆಗೆ ಕೊಲ್ಲಿ ರಾಷ್ಟ್ರಗಳು ಸಾಗರೋತ್ಪನ್ನಗಳ ವ್ಯಾಪಾರದ ಏರಿಕೆಯಿಂದಾಗಿ ಸ್ವಲ್ಪಮಟ್ಟಗೆ ಸಮಾಜಿಕ, ಆರ್ಥಿಕ, ಅಭಿವೃದ್ಧಿಯನ್ನು ಸಾದಿಸಿದವು. ಬದಲಾಗುತ್ತಿರುವ ಸಮಾಜದ ಅವಶ್ಯಕತೆಗಳನ್ನು ಪೊರೈಸಲಾಗದ ಕಾರಣ ಮುಕ್ತಾಬ್ ಮತ್ತು ಮದ್ರಸಾಗಳಲ್ಲಿದ್ದ ಸಂಪ್ರದಾಯಿಕ ಶಿಕ್ಷಣ ಪದ್ಧತಿಯನ್ನು ಬದಲಾಯಿಸ ಬೇಕಾದ ಅವಶ್ಯಕತೆಯನ್ನು ಮನಗಂಡರು. ಸಂಪ್ರದಾಯಿಕ ಸಮಾಜದ ವ್ಯವಸ್ಥೆಯಲ್ಲಿ ಇಡೀ ಕೊಲ್ಲಿಪ್ರಾಂತ್ಯದ ಹೆಣ್ಣುಮಕ್ಕಳ ಶಿಕ್ಷಣವು ಸಮಾಜಿಕವಾಗಿ ನಿರುತ್ಸಾಹ ಗೊಳಿಸಲಾಗಿತ್ತು. ೧೯೩೦ ರಲ್ಲಿ ಬಹರೀನ ಸರ್ಕಾರವು ಹೆಣ್ಣುಮಕ್ಕಳಿಗೆ ಶಿಕ್ಷಣವನ್ನು ವಿಸ್ತರಿಸಿದಾಗ ಸಾರ್ವಜನಿಕರು ವಿರೋಧವನ್ನು ವ್ಯಕ್ತಪಡಿಸಿದರು. (ರೆಹೆಮತ್ ತರಕೇರಿ,2000 ,ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ:೩, ಪು.ಸಂ.೩೪೮).

ಧರ್ಮ ಮತ್ತು ಶಿಕ್ಷಣದ ಸಂಬಂಧದ ವಿಷಯದಲ್ಲಿ ಭಾರತೀಯ ಎಲ್ಲಾ ಸಮುದಾಯಕ್ಕಿಂತ ಅತಿ ಹೆಚ್ಚಿನ ಗೊಂದಲು ಕಂಡುಬರುವುದು ಮುಸ್ಲಿಂ ಸಮುದಾಯದಲ್ಲೆ ವಿಜ್ಞಾನ, ಭಾಷೆಗಳು, ಗಣಿತ, ಇತಿಹಾಸ, ವೈದ್ಯಕೀಯಶಾಸ್ತ್ರ, ಖಗೋಳಶಾಸ್ತ್ರ, ರಸಾಯನ ಶಾಸ್ತ್ರ ಇತ್ಯಾದಿ ಮನುಕುಲಕ್ಕೆ ಉಪಯುಕ್ತವಾದ ಜ್ಞಾನದ ಎಲ್ಲಾ ಶಾಲೆಗಳನ್ನು ಇಸ್ಲಾಂ ಧರ್ಮ ಪ್ರೋತ್ಸಾಯಿಸುತ್ತದೆ. ಆದ್ದರಿಂದಲೇ ಮುಸ್ಲಿಂಧರ್ಮಕ್ಕೆ ಅಥವಾ ಧಾರ್ಮಿಕ ತಿರುಳಿಗೆ ಹೆಚ್ಚು ನಿಕಟರಾಗಿದ್ದರು. ಜ್ಞಾನದ ವಿಷಯದಲ್ಲಿ ಇಸ್ಲಾಮ್ ಧರ್ಮವು ಲೌಕಿಕ ಪರಲೌಕಿಕ ಎಂಬ ವಿಂಗಡನೆಯನ್ನು ಅಂಗೀಕರಿಸುವುದಿಲ್ಲ ವಾಸ್ತವ್ಯದಲ್ಲಿ ಇಂತಹ ವಿಂಗಡನೆ ಹುಟ್ಟಿನ ಆಧಾರದಲ್ಲಿ ಕಸುಬನ್ನು ನಿರ್ಧರಿಸಿ ಇತರ ಕಸುಬುಗಳನ್ನು ನಿಷೇದಿಸುವ ಇಸ್ಲಾಮೇತರ ಪದ್ಧತಿಗಳಷ್ಟೆ ಅಸಂಬದ್ಧ.(ಮಹಮ್ಮದ್ ಕುಳಾಯಿ, ಶರ್ಫುದ್ದಿನ್ ಬಿ.ಎನ್, ಅಕ್ಬರ್ ಅಲಿ, ೨೦೦೦, ಪು.ಸಂ. ೬೪-೬೫).

ಶೈಕ್ಷಣಿಕ ಪ್ರಗತಿಯ ನಿಟ್ಟಿನಲ್ಲಿ ನಡೆಯುವ ಯಾವುದೇ ಪ್ರಯತ್ನವು ಅವರ ಸರ್ವಾಂಗಿಣ ಪ್ರಗತಿಗೆ ಇರುವ ಒಂದು ಸಮಗ್ರ ಕಾರ್ಯಕ್ರಮದ ಒಂದು ಅಂಗಕಾರವಾಗಬೇಕು ಅವರ ರಾಜಕೀಯ ಸ್ಥಿತಿ, ಸಾಮಾಜಿಕಸ್ಥಿತಿ ಸಾಮಾನ್ಯವರ್ತನೆ, ಧರ್ಮದ ಬಗ್ಗೆ ಅವರ ಕಲ್ಪನೆ ಐತಿಹಾಸಿಕವಾಗಿ ಅವರ ವಿವಿಧ ನಡುವಳಿಕೆಗಳಲ್ಲಿ ಆಗಿರುವ ಪ್ರಯತ್ನವನ್ನು ನಿರ್ಲಕ್ಷಿಸಿ ಒಂದು ಕ್ಷೇತ್ರದಲ್ಲಿ ಮಾತ್ರ ಸುಧಾರಣೆ ಬಯಸುವರು. ಮಸೀದಿ ಕಟ್ಟುವುದು ಒಂದು ಧಾರ್ಮಿಕ ಪುಣ್ಯಕಾರ್ಯ ಆದರೆ ಶಾಲೆ ಕಟ್ಟುವುದು ಒಂದು ಶುದ್ಧ ಲೌಕಿಕ ಕ್ರಿಯೆ ಎಂದು ನಂಬಿದ್ದರು. ಈ ನಂಬಿಕೆಯನ್ನು ಉಳಿಸುವ ತನಕ ಧರ್ಮ ಅಥವಾ ಶಿಕ್ಷಣ ಎರಡರಲ್ಲಿ ಒಂದನ್ನು ತೊರೆಯಲೇಬೇಕಾಗುತ್ತದೆ. (ಮಹಮ್ಮದ್ ಕುಳಾಯಿ, ಶರ್ಫುದ್ದಿನ್ ಬಿ.ಎನ್, ಅಕ್ಬರ್ ಅಲಿ, ೨೦೦೦, ಪು.ಸಂ. ೬೪).

ಸಂಪ್ರದಾಯಿಕ ಶಿಕ್ಷಣವನ್ನು ಗಂಡು ಮಕ್ಕಳಿಗೆ ಮಾತ್ರ ನೀಡಲಾಗುತ್ತಿದ್ದು ಶ್ರೀಮಂತ ಹೆಣ್ಣು ಮಕ್ಕಳಿಗೆ ಮನೆಯಲ್ಲಿಯೇ ಓದುವ ವ್ಯವಸ್ಥೆ ಮಾಡಲಾಗಿತ್ತು. ಮುಸ್ಲೀಮ್ ಸಮುದಾಯದಲ್ಲಿ ಮಹಿಳೆಗೆ ಎರಡನೆಯ ದರ್ಜೆಯ ಸ್ಥಾನವನ್ನು ನೀಡಲಾಗಿತ್ತು. ಮಹಿಳೆಯರು ನೈಜ ಶಿಕ್ಷಣ ಮತ್ತು ತರಬೇತಿಯ ಕೇಂದ್ರ ಆಕೆಯ ಮನೆ (ಕುಟುಂಬ) ಆಗಿತ್ತು. ಆದ್ದರಿಂದ ಇಸ್ಲಾಮ್ ಸ್ತ್ರೀಗೆ ಸತ್ಯ-ಮಿತ್ಯದ ವ್ಯತ್ಯಾಸ ತಿಳಿಸುವಂತೆ ಮತ್ತು ತಪ್ಪುಮಾರ್ಗದಿಂದ ಆಕೆಯನ್ನು ತಡೆಯುವಂತೆ ತಂದೆ-ತಾಯಿ ಮತ್ತು ಪತಿಗೆ ಆಜ್ಞಾಪಿಸಿದೆ. ಕುಟುಂಬ ಮಹಿಳೆಯ ಕಾರ್ಯ ಕ್ಷೇತ್ರವಾಗಿದೆ. ಕುಟುಂಬವು ವ್ಯಕ್ತಿಯ ವೈಚಾರಿಕ

ತರಬೇತಿಯನ್ನು ನೀಡಿದರೆ ಶಾಲೆ ಮತ್ತು ವಿಶ್ವವಿದ್ಯಾನಿಲಯಗಳು ವ್ಯಕ್ತಿಯ ಪ್ರಗತಿಯಲ್ಲಿ ನೆರವಾಗುತ್ತದೆ. ಪುರುಷನ ಸಂಬಂಧಗಳು ಕುಟುಂಬ ಜೀವನದೊಂದಿಗಿರುವುದಕ್ಕಿಂತ ಹೆಚ್ಚಾಗಿ ಮನೆಯ ಹೊರಗಿನ ಜೀವನದೊಂದಿಗಿದೆ.

ಮುಸ್ಲಿಂ ಸಮುದಾಯದಲ್ಲಿ ತಮ್ಮ ಮಕ್ಕಳಿಗೆ ಮೊದಲು ಧಾರ್ಮಿಕ ಶಿಕ್ಷಣ ಪಡೆಯುವಂತೆ ಒತ್ತು ನೀಡಿದ್ದು ಒಂದು ವೇಳೆ ಪ್ರಾಂತಿಯ ಶಿಕ್ಷಣ ಪಡೆದರು ಅದರಲ್ಲೂ ಹೆಣ್ಣು ಮಕ್ಕಳಿಗೆ ೬ನೇ ಅಥವಾ ೭ನೇ ತರಗತಿಯವರೆಗೆ ಮಾತ್ರ ಓದಿಸಿ ಶಾಲೆಯನ್ನು ಬಿಡಿಸಿ ಯಾವುದಾದರು ಮನೆಯಲ್ಲಿ ಕೆಲಸ ಮಾಡಲು ಇಲ್ಲದೆ ವಿವಾಹ ಮಾಡುವ ಉದ್ದೇಶದಿಂದ ಅವರನ್ನು ಶಾಲೆ ಬಿಡಿಸುತ್ತಿದ್ದರು.ಇದಕ್ಕೆ ಮೂಲ ಕಾರಣ ಬಡತನ, ಪಾಲಕರಲ್ಲಿನ ಅಜ್ಞಾನವೇ ಆಗಿದೆ. ಅಶಿಕ್ಷಿತ ಪೀಳಿಗೆ ಅಶಿಕ್ಷಿತ ಪೀಳಿಗೆಗೆ ಜನ್ಮನೀಡುತ್ತದೆ. ಆದ್ದರಿಂದ ಮುಂದಿನ ಪೀಳಿಗೆಯನ್ನು ಶಿಕ್ಷಿತಗೊಳಿಸಲು ಇಂದಿನ ಪೀಳಿಗೆಯಲ್ಲಿ ಜಾಗೃತಿಯುಂಟು ಮಾಡಬೇಕಾದುದು ಅಗತ್ಯವಾಗಿದೆ. ಶೈಕ್ಷಣಿಕ ಹಿಂದುಳಿವಿಕೆಯ ಪರಮಾವಧಿ ನೋಡಬೇಕಾದರೆ ಮುಸ್ಲಿಂ ಹೆಣ್ಣು ಮಕ್ಕಳ ಶೈಕ್ಷಣಿಕ ಮಟ್ಟ ನೋಡಬೇಕು. ಹೆಣ್ಣು ಸಮಾಜದ ಅರ್ಧಭಾಗ ಮಾತ್ರವಲ್ಲ ಮುಂದಿನ ಪೀಳಿಗೆಯ ತಾಯಿಯೂ ಹೌದು ತನ್ನ ಅರ್ಧ ಭಾಗವನ್ನು ಅಜ್ಞಾನದ ಕತ್ತಲಲ್ಲಿ ಕಟ್ಟಿಡುವ ಸಮಾಜ ಬೆಳಕನ್ನು ಪಡೆಯಲಾರದು. (ಮಹಮ್ಮದ್ ಕುಳಾಯಿ, ಶರ್ಫುದ್ದಿನ್ ಬಿ.ಎನ್, ಅಕ್ಬರ್ ಅಲಿ, ೨೦೦೦, ಪು.ಸಂ.೬೯).

ಮುಸ್ಲೀಂ ಸಮುದಾಯದಲ್ಲಿ ಮಹಿಳೆಯರಿಗೆ ಕೇವಲ ಪ್ರಾಥಮಿಕ ಶಿಕ್ಷಣವನ್ನು ಮಾತ್ರ ಕೊಡುವರು ಒಂದು ವೇಳೆ ಮುಂದಿನ ಶಿಕ್ಷಣವನ್ನು ನೀಡಿದರು, ಹೈಸ್ಕೂಲಿಗೆ ಹೋಗುವುದನ್ನು ಜಾಗರುಕತೆಯಿಂದ ತಡೆಯಲಾಗುತ್ತದೆ. ಮುಖ್ಯವಾಗಿ ಶಾಫಿ ಪಂಗಡ ಈ ನಿಯಮ ಕಟ್ಟು-ನಿಟ್ಟಾಗಿ ಶ್ರದ್ಧೆಯಿಂದ ಪಾಲಿಸುತ್ತದೆ. ಆದರೆ ಹನೀಫ್ ಗುಂಪಿನಲ್ಲಿ ಹುಡುಗಿಯರಿಗೆ ಹೆಚ್ಚು ಕಡಿಮೆ ಪುರುಷನಿಗೆ ಸರಿ ಸಮಾನವಾಗಿ ವಿಧ್ಯಾಭ್ಯಾಸ ಪಡೆಯಲು ಅವಕಾಶ ಕಲ್ಪಿಸಲಾಗಿದೆ. (ಮಹಮ್ಮದ್ ಕುಳಾಯಿ, ಶರ್ಫುದ್ದಿನ್ ಬಿ.ಎನ್, ಅಕ್ಬರ್ ಅಲಿ, ೨೦೦೦, ಪು.ಸಂ. ೧೦೦).

ಸಮಾಜದಲ್ಲಿರುವ ಹೆಚ್ಚಿನ ಶಾಲೆಗಳಲ್ಲಿ ಹುಡುಗ ಹುಡುಗಿಯರ ಜೊತೆಯಾಗಿ ಕಲಿಯುವಂತಹ ಮಿಶ್ರ ವ್ಯವಸ್ಥೆ ಇದ್ದಾಗ ಸುಮಾರು ಏಳನೆ ತರಗತಿಯ ವರೆಗೆ ಇಂತಹಶಾಲೆಗೆ ಹೆಣ್ಣುಮಕ್ಕಳನ್ನು ಕಳುಹಿಸುವುದಕ್ಕೆ ಹೆತ್ತವರು ಹಿಂಜರಿಯುವುದಿಲ್ಲ . ಆದರೆ ಅದರ ಬಳಿಕ ಹೆಣ್ಣು

ಬೆಳೆಯ ತೊಡಗಿದಂತೆ ಆತಂಕಗಳು ಹೆಚ್ಚಾಗುತ್ತದೆ. ಇದು ಕೇವಲ ಮುಸ್ಲಿಂರಲ್ಲಿ ಮಾತ್ರವಲ್ಲ ಇತರ ಸಮುದಾಯದಲ್ಲಿಯು ಮಿಶ್ರಶಾಲೆಗಳ ಬಗ್ಗೆ ಆಂತಕ ಉಂಟಾಗುತ್ತದೆ ೧೦ನೇತರಗತಿ ಮುಗಿಯದರೊಳಗೆ ಶಾಲೆ ಬಿಡಿಸಿ ಮದುವೆ ಮಾಡಿಕೊಡುವುದು ಕಂಡುಬರುತ್ತದೆ. ಇದರಿಂದ ಹೆಣ್ಣಿನ ಶರೀರ ಮನಸ್ಸು ಹಾಗೂ ಆಕೇಯ ಭವಿಷ್ಯದ ಮೇಲೆ ದುಷ್ಪರಿಣಾಮ ಬಿರುತ್ತದೆ. ಸಣ್ಣ ವಯಸ್ಸಿನಲ್ಲಿಯೇ ಕೌಟುಂಬಿಕ ಹೊಣೆಗಾರಿಕೆಗಳು ಅವಳ ಮೇಲೆ ಬೀಳುತ್ತವೆ. ಇದರಿಂದ ಮಾನಸಿಕವಾಗಿ ದುಸ್ಥಿತಿಗೆ ಇಳಿಯುವಳು. (ಮುಹಮ್ಮದ್ ಕುಳಾಯಿ, ಶರ್ಫುದ್ದಿನ್ ಬಿ.ಎನ್, ಅಕ್ಬರ್ ಅಲಿ, ೨೦೦೦, ಪು.ಸಂ. ೭೦).

ತೀರಾ ನಗಣ್ಯ ಸಂಖ್ಯೆಯಲ್ಲಿ ಮುಸ್ಲಿಂ ಹೆಣ್ಣು ಮಕ್ಕಳು ಕಾಲೇಜಿಗೆ ಹೋಗುವ ತಮ್ಮ ಮಗಳು ಚಾರಿತ್ರ್ಯದ ಬಗ್ಗೆ ಆತಂಕವನ್ನು ಹೊಂದುವರು. ಸಮಾಜಿಕ ಮೌಲ್ಯಗಳಿಗನುಗುಣವಾಗಿ ತಮ್ಮ ಮಗಳ ಪರ್ದಾದ ನಿಭಂಧನೆಯನ್ನು ಪಾಲಿಸಬೇಕು. ಆದರೆ ಕಾಲೇಜಿನಲ್ಲಿ ಆಕೆ ಅದನ್ನು ಪಾಲಿಸಲಾರಳು ಎಂಬ ಭೀತಿ ಇರುತ್ತದೆ. ಒಂದು ವೇಳೆ ಅವಳು ಪರದಾ (ಬುರುಖಾ) ನಿರಾಕರಿಸಿದರೆ ಅವಳಿಗೆ ಶಾಲೆ-ಕಾಲೇಜುಗಳಿಗೆ ಹೋಗಬಾರದೆಂದು ನಿರ್ಭಂಧನೆಗಳು ಹೇರುವರು ಹೀಗಾಗಿ ಶಿಕ್ಷಣ ಪಡೆಯಬೇಕೆನ್ನುವ ಆಸೆಯಿಂದ ಅವಳು ಬುರ್ಖಾ ಹಾಕಿಕೊಂಡೇ ತನ್ನ ಶಿಕ್ಷಣವನ್ನು ಮುಂದುವರೆಸುವಳು.

ಪರದಾ ಸಂಬಂಧಿಸಿದ ವಿಷಯಕ್ಕೆ ಸಂಬಂಧಿಸಿದಂತೆ ಕೇರಳಾದ ಮುಸ್ಲಿಂ ಮಹಿಳೆಯರನ್ನು ನೋಡಿ ಕಲಿಯಬೇಕಾಗಿದೆ. ಕೇರಳಾದಲ್ಲಿ ಮಹಿಳೆಯರಿಗಾಗಿ ಇರುವ ಧಾರ್ಮಿಕ ಹಿನ್ನೆಲೆಯ ಕಾಲೇಜಿನ ವಿಧ್ಯಾರ್ಥಿಳಾಗಲಿ, ಶಿಕ್ಷಕಿಯರಾಗಲಿ, ಬುರ್ಖಾ ಧರಿಸುವದಿಲ್ಲಾ ಸಾಮಾನ್ಯ ಬಳಕೆಯ ಉಡುಗೆಗಳ ವಿನ್ಯಾಸದಲ್ಲೇ ಸ್ವಲ್ಪ ಸುಧಾರಣೆ ಮಾಡಿ ಇಸ್ಲಾಮಿ 'ಹಿಜಾಬ್' (ಪೂರ್ಣ ವಸ್ತ್ರ) ಬೇಡಿಕೆಯನ್ನು ಇಡೇರಿಸಿಕೊಳ್ಳುತ್ತಾರೆ. ರವಿಕೆಯನ್ನು ಎದೆಯ ಕೆಳಗೆ ಕೊನೆಗೊಳ್ಳುವ ಬದಲು ಸೊಂಟದವರೆಗೆ ಹರಡುವಷ್ಟು ನೀಳವಾಗಿರುತ್ತದೆ. ರವಿಕೆಯ ತೋಳುಗಳು ಹಸ್ತದವರೆಗೆ ಉದ್ದವಾಗಿರುತ್ತದೆ, ಬೂಟಿನೊಳಗೆ ಕಾಲುಚೀಲ ಧರಿಸಿಕೊಳ್ಳುತ್ತಾರೆ, ಮುಖ ಬಿಟ್ಟು ಸ್ಕಾರ್ಫ್ ಧರಿಸಿಕೊಳ್ಳುತ್ತಾರೆ, ಎಲ್ಲಾ ಅವಶ್ಯಕ ಚಟುವಟಿಕೆಗಳಿಗೆ ಅನುಕೂಲಕರವಾದ ಈ ಉಡುಗೆ ಇಸ್ಲಾಮ್‌ಗೆ ವಿರುದ್ಧವೆಂದು ಅಲ್ಲಿಯ ವಿದ್ವಾಂಸರು ತಕರಾರು ಮಾಡಿಲ್ಲಾ. (ಮುಹಮ್ಮದ್ ಕುಳಾಯಿ, ಶರ್ಫುದ್ದಿನ್ ಬಿ.ಎನ್, ಅಕ್ಬರ್ ಅಲಿ, ೨೦೦೦, ಪು.ಸಂ. ೭೧).

ದಕ್ಷಿಣ ಕನ್ನಡ ಜಿಲ್ಲೆ ಶಿಕ್ಷಣ ಕ್ಷೇತ್ರದಲ್ಲಿ ರಾಜ್ಯದಲ್ಲೆ ಪ್ರಥಮ ಸ್ಥಾನದಲ್ಲಿದೆ. ಇಲ್ಲಿ ವಿವಿಧ ಜಾತಿ ಧರ್ಮ ಭಾಷೆಯ ಜನರು ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿರುತ್ತಾರೆ. ಹಾಗೆಯೇ ವಸ್ತು ನಿಷ್ಠವಾದ ಶಿಕ್ಷಣವನ್ನು ಕೊಡುತ್ತಿದ್ದಾರೆ. ಈ ನೆಲೆಯಲ್ಲಿ ಮಣಿಪಾಲದ ಕುಟುಂಬದವರು ಹಾಗೂ ಧರ್ಮಸ್ಥಳ ಹೆಗಡೆಯವರು ಇವರುಗಳ ಸಾಧನೆ ಅಮೋಘವಾದುದು. ಸರಕಾರದಿಂದ ದೊರಕುತ್ತಿರುವ ಅಲ್ಪಸಂಖ್ಯಾತರ ಸವಲತ್ತುಗಳೊಂದಿಗೆ ಗಮನಾರ್ಹವಾದ ಸ್ವಪ್ರಯತ್ನವೂ ಸಹ ನಡೆಯುತ್ತಿದೆ. ಕಾಲೇಜು ಶಿಕ್ಷಣವನ್ನು ಕೊಡುತ್ತಿರುವ ಏಕಮಾತ್ರ ಮುಸ್ಲೀಮ್ ವಿದ್ಯಾಸಂಸ್ಥೆ **ಮುಸ್ಲೀಮ್ ಎಜ್ಯುಕೇಶನ್ ಅಸೋಸಿಯೇಶನ್** ಈ ಸಂಸ್ಥೆಯ ಅಧ್ಯಕ್ಷರಾಗಿ ಬಿ. ಅಹ್ಮದ್ ಹಾಜಿ ಹಾಗೂ ಸಂಚಾಲಕರಾಗಿ ಪ್ರೊ ಪಿ.ಸಿ.ಎಮ್. ಕುಂಞ ರವರ ಪಾತ್ರವನ್ನು ಗುರುತಿಸಬಹುದಾಗಿದೆ. (ಮಹಮ್ಮದ್ ಕುಳಾಯಿ, ಶರ್ಫುದ್ದಿನ್ ಬಿ.ಎನ್, ಅಕ್ಬರ್ ಅಲಿ, ೨೦೦೦, ಪು.ಸಂ. ೯೨).

ಮುಸ್ಲೀಮ್ ಸಮುದಾಯದಲ್ಲಿ ಧರ್ಮದ ಮೂಲ ತತ್ವಗಳು ಪಾಲಿಸುವ ಜವಾಬ್ದಾರಿ ಸ್ತ್ರೀಯರ ಮೇಲೆಯೆ ಇದೆ. ಸ್ತ್ರೀಯು ಈ ತತ್ವಗಳನ್ನು ತಮ್ಮ ಜೀವನದಲ್ಲಿ ಪಾಲಿಸ ಬೇಕಾದರೆ ಧರ್ಮದ ಭೋದನೆಗಳನ್ನು ಅವರು ಚೆನ್ನಾಗಿ ಅರಿತಿರಬೇಕು.

ಧರ್ಮದ ಪ್ರಭಾವ ಕಡಿಮೆಯಾಗುವುದರಿಂದ ಮಹಿಳೆಯು ಶಿಕ್ಷಣದಲ್ಲಿ ಹೆಚ್ಚು ಒಲವು ತೋರಿಸುವಳು. ಆದರೆ ಧರ್ಮ ಪ್ರಭಾವಶಾಲಿಯಾದರೆ ಮಹಿಳೆಯು ನಿಶಕ್ತಿಯಾಗುವಳು ಅದೇ ಪರಿಸ್ಥಿತಿ ಮುಸ್ಲಿಂ ಮಹಿಳೆಯರದು ಆಗಿದೆ. ಇಂತಹ ವ್ಯವಸ್ಥೆ ನಿವಾರಣೆಯಾಗದ ಹೊರತು ಮಹಿಳೆ ಶಿಕ್ಷಣ ಪಡೆಯಲು ಸಾಧ್ಯವಿಲ್ಲ.

ಮುಸ್ಲಿಂ ಮಹಿಳೆಯರಿಗೆ ಶಿಕ್ಷಣದ ಬಗ್ಗೆ ಬೇಗಂ ರೋಖೆಯಾರವರ ಅಭಿಪ್ರಾಯ ಈ ರೀತಿಯಾಗಿದೆ. ಇವರು ಮುಸ್ಲಿಂ ಮಹಿಳೆಯರ ಶಿಕ್ಷಣಕ್ಕೆ ಹೆಚ್ಚು ಒಲವನ್ನು ತೋರಿಸಿ ಅದೇರೀತಿ ಶಿಕ್ಷಣಕ್ಕೆ ಅಡ್ಡಿಯಾಗಿರುವಂತಹ ಕೆಲವು ಸಂಪ್ರದಾಯಗಳನ್ನು ಇವರು ವಿರೋಧಿಸಿದರು ಅದೇ ರೀತಿ ಇವರ ಕೆಲವು ಅಭಿಪ್ರಾಯಗಳು ಈ ರೀತಿಯಾಗಿವೆ.

**ಬೇಗಂ ರೋಕೆಯಾ ಶೇಖಾವತ್ ಹುಸೇನ್**

ಬಿಹಾರದ ಭಾಗಲ್ ಪುರ ಜಿಲ್ಲೆಯಲ್ಲಿ ೧೯೦೯ರಲ್ಲಿ ಬೇಗಂ ರೋಖೆಯಾ ಶೇಖಾವತ್ ಹುಸೇನ್ (೧೮೮೦-೧೯೩೨)ರವರು ಮುಸ್ಲಿಂ ಮಕ್ಕಳಿಗಾಗಿ ಶಾಲೆಯೊಂದನ್ನು ತೆರೆದರು. ತರುಣದಲ್ಲಿಯೇ ಪತಿಯನ್ನು ಕಳೆದುಕೊಂಡರು. ಈ ಶಾಲೆಯನ್ನು ಆರಂಭಿಸಿದಾಗ ಇವಳ ಪತಿಯ ಸಂಬಂಧಿಕರು ವಿರೋಧಿಸಿದರು, ಅವಳ ಮಲಮಕ್ಕಳು ಮನೆಯಿಂದ ಹೊರಗೆ ಹಾಕಿದರು ಬೇಗಂ ರೋಕೆಯಾ ಶಾಲೆಯನ್ನು ಮುಚ್ಚಿ ಕಲ್ಕತ್ತಾಕ್ಕೆ ಬಂದರು. ಮರಳಿಯತ್ನವ ಮಾಡಿ ಎನ್ನುವಂತೆ ಕಲ್ಕತ್ತಾದಲ್ಲಿ ೧೯೧೧ ರಲ್ಲಿ ರೋಕೆಯಾರವರು ಸ್ಮಾರಕ ಬಾಲಕೀಯರ ಶಾಲೆಯನ್ನು ತೆರೆದರು ಈ ಕ್ಷೇತ್ರದಲ್ಲಿ ಅವರೇ ಮುಂದಾಳೆಂದು ಗುರುತಿಸಲಾಯಿತು. ಈ ಶಾಲೆಯಲ್ಲಿ ಉರ್ದುವೇ ಶಿಕ್ಷಣ ಮಾಧ್ಯಮವಾಗಿತ್ತು. ರೋಕೆಯಾರವರು ಪರದಾ ಪದ್ಧತಿ ಅನಿಷ್ಠ ಎಂದು ತಮ್ಮ ಭಾಷಣದಲ್ಲಿ ಬರಹಗಳಲ್ಲಿ ಹೇಳುತ್ತಿದ್ದರು. ಆದರೆ ಅವರ ಶಾಲೆಯಲ್ಲಿ ಪರದಾ ಧರಿಸಿದ್ದ ಬಾಲಕೀಯರೇ ಇದ್ದುದ್ದು ಅವರಿಗನುಕೂಲಕರವಾಗಿಯೇ ಪಠ್ಯಕ್ರಮವನ್ನು ರೂಪಿಸಿ ಜಾರಿಗೊಳಿಸ ಬೇಕಾಗಿತ್ತು.(ಶ್ರೀ ಮತಿ ಎಚ್.ಎಸ್ (ಸಂ), ೨೦೦೧, ಪು.ಸಂ ೭೮-೭೯)

ಅರ್ಧಾಂಗಿ, ಗೃಹ ಹಾಗೂ ಬುರ್ಖಾ ಎಂಬ ತಮ್ಮ ಮೂರು ಪ್ರಭಂಧಗಳಲ್ಲಿ ರೋಕೆಯಾ ಹೆಂಗಸರ ಅಸಮತೋಲನ ಬೆಳವಣಿಗೆಯನ್ನು ಕುರಿತು ಮುಚ್ಚಿ ಹೋಗಿರುವ ಆರ್ಥಿಕತೆಯ ಹಾದಿಗಳನ್ನು ಕುರಿತು ಪುರುಷರ ಮರ್ಯಾದೆಯ ಹೆಸರಿನಲ್ಲಿ ಬಂಧನದಲ್ಲಿ ಬಿದ್ದಿರುವದನ್ನು ಕುರಿತು ತೀವ್ರವಾಗಿ ಖಂಡಿಸಿ ಬರೆದಿದ್ದಾರೆ. `ಸುಗೃಹಿಣಿ` ಎಂಬ ಪ್ರಬಂಧದಲ್ಲಿ ಶಿಕ್ಷಣವು ಮಹಿಳೆಯರಿಗೆ ತಮ್ಮ ಪಾರಂಪರಿಕ ಪಾತ್ರಗಳನ್ನು ಹೆಚ್ಚಿನ ತಿಳುವಳಿಕೆಯಿಂದ ಹೆಚ್ಚಿನ ಪರಿಣತೆಯಿಂದ ನಿರ್ವಹಿಸಲು ನೆರವಾಗುತ್ತದೆ. ಮಹಿಳೆಯರು ತಮ್ಮ ಪುರುಷ ಸಂಗಾತಿಗಳ ಹೆಜ್ಜೆಗೆ ಹೆಜ್ಜೆ ಕೂಡಿಸಿ ಸರಿಸಮಾನರಾಗಿ ಬೆಳೆದು ಮುಂದುವರೆಯುವಲ್ಲಿ ಕೂಡ ಶಿಕ್ಷಣವು ನೆರವಾಗುತ್ತದೆ ಎಂದು ಹೇಳಿದ್ದಾರೆ.

ಪಂಜಾಬ್ ಮತ್ತು ಸಂಯುಕ್ತ ಸಂಸ್ಥಾನಗಳಲ್ಲಿನ ಇತರ ಬಾಲಕೀಯರ ಶಾಲೆಗಳಲ್ಲಿದ್ದಂತೆ ಬೇಗಂ ರೋಕೆಯಾ ಅವರ ಶಾಲೆಯಲ್ಲೂ ಪಠ್ಯಕ್ರಮಗಳೂ ಪರದಾ ನಿರ್ಬಂಧಗಳೂ ಇದ್ದೇ ಇದ್ದುವು. ಸಾಕ್ಷರತೆ ಕರಕುಶಲ ಕಲೆಗಳು, ಗೃಹವಿಜ್ಞಾನ, ತೋಟಗಾರಿಕೆ ಇಂಥವುಗಳನ್ನು ಕುರಿತೇ ಒತ್ತು ಕೊಡಲಾಗಿದ್ದುದ್ದು. ಇನ್ನು ಕೆಲವು ಶಾಲೆಗಳಲ್ಲಿ ಹುಡುಗಿಯರಿಗೆ ಕೊಡುವ ಶಿಕ್ಷಣವು ಅವರನ್ನು

ಒಳ್ಳೆಯ ಹೆಂಡತಿಯರಾಗಿ, ತಾಯಿಯರಾಗಿ ರೂಪಿಸುವಂತಿರಬೇಕು. (ಶ್ರೀ ಮತಿ ಎಚ್.ಎಸ್ (ಸಂ), ೨೦೦೧, ಪು.ಸಂ. ೭೯).

ಗಂಡಂದಿರಿಗೆ ಒಳ್ಳೆಯ ಸಂಗಾತಿಗಳಾಗಿ, ಸಹಾಯಕಿಯರಾಗಿ ಅವರ ಜೊತೆ ಕೂಡುವಂತಾಗಬೇಕು. ಮಕ್ಕಳಿಗೆ ಒಳ್ಳೆಯ ಅಧ್ಯಾಪಕಿಯರಾಗಬೇಕು ಎಂಬ ಗುರಿಗಳನ್ನು ಹೊಂದಿದ್ದವು.

ಮಹಿಳೆಯ ಪ್ರತ್ಯೇಕತೆ ಬಗ್ಗೆ ಇವರು ಬಹಳ ಶ್ರಮ ಪಟ್ಟರು. ಮಹಿಳೆಯರ ಪ್ರತ್ಯೇಕತೆ ಬಗ್ಗೆ ಹಲವಾರು ಕಟ್ಟು ನಿಯಮಗಳಿವೆ. ಮುಸ್ಲಿಂ ಮಹಿಳೆಯರು ಮನೆಯಿಂದ ಹೊರಗೆ ಹೋಗಬೇಕಾದರೆ ಧರಿಸಲೇಬೇಕೆಂದು ಬುರ್ಖಾವನ್ನು ಸಿದ್ಧಗೊಳಿಸಲಾಗಿದೆ. ಈ ಧರಿಸನ್ನು ಸ್ವಲ್ಪಮಟ್ಟಿಗೆ ಉತ್ತಮ ಪಡಿಸಿ ತಲೆಯ ಕೂದಲನ್ನು ಮುಚ್ಚುವಂತೆ ಸಿದ್ಧಪಡಿಸಲಾಯಿತು. ಉಡುಪು ಪರಂಪರೆಗೆ ವಿಧೆಯತೆಯನ್ನು ತೋರುತ್ತಲೆ ಆಧುನಿಕತೆ ತೆರೆದುಕೊಳ್ಳುವ ಒಂದು ವಿಧಾನವಾಯಿತು.

ಮಹಿಳೆಯರ ಪ್ರತ್ಯೇಕತೆಯನ್ನು ರೋಕೆಯಾರವರು ಶಾಲೆಯಲ್ಲಿ ನಿಷ್ಠೆಯಿಂದ ಪಾಲಿಸುತ್ತಿದ್ದರು. `ಬುರ್ಖಾ` ಎನ್ನುವ ಪ್ರಬಂಧ ಮತ್ತು ೧೯೦೫ ರಲ್ಲಿ `ಸುಲ್ತಾನಳ ಕನಸು` ಎಂಬ ಕಲೆಯನ್ನು ಬರೆದರು. ಈ ಕಥೆಯಲ್ಲಿ ಮಹಿಳೆಯರು ಹೊರಜಗತ್ತಿಗೆ ನುಗ್ಗಿ ಬರುವಂತೆಯು ಪುರುಷರು ಮನೆಯ ಬಾಗಿಲ ಹಿಂದೆ ಇಣುಕುತ್ತಿರುವಂತೆ ಚಿತ್ರಿಸಿದರು. ೧೯೨೯ರಲ್ಲಿ ಅವರೋಧ ಭಾವಿಸಿ (ಪ್ರತ್ಯೇಕಗಿ ೊಂಡವರು) ಎಂಬ ಧಾರವಾಹಿಯ ವರದಿಯಲ್ಲಿ ಪರದಾ ಪದ್ಧತಿಯನ್ನು ನಲವತ್ತೇಳು ಕಂತುಗಳಲ್ಲಿ ವಿವರವಾಗಿ ದಾಖಲಿಸಿದ್ದಾರೆ. ಪರದಾ ಪದ್ಧತಿಯು ಎಂಥಾ ದೊಡ್ಡ ದುರಂತದ ವ್ಯಥೆಯ ಪದ್ಧತಿಯಾಗಿದೆ. ಎಂಬುದು ಜನರು ಅರ್ಥಮಾಡಿಕೊಳ್ಳಬೇಕು ಅವರ ಬರವಣಿಗೆಯ ಮುಖ್ಯ ಉದ್ದೇಶವಾಗಿತ್ತು. ಅವರ ಚಿಕ್ಕಮ್ಮ ರೈಲಿಗೆ ಸಿಕ್ಕಿಸಾಯುವ ಪ್ರಸಂಗದಲ್ಲಿ ಪರದಾ ದೆಸೆಯಿಂದಾಗಿ ಜೋರಾಗಿ ಕೂಗಿಕೊಳ್ಳಲು ಸಾಧ್ಯವಾಗದೇ ಹೋಯಿತು ಎಂಬ ಈ ಅನುಭವ ಅವರ ನೋವಿನ ಹಿಂದೆ ಇತ್ತು (ಶ್ರೀ ಮತಿ ಎಚ್.ಎಸ್ (ಸಂ), ೨೦೦೧, ಪು.ಸಂ ೮೦). ಕಾರ್ಬನ್ ಮಾನಾಕ್ಸೈಡ್ ಗ್ಯಾಸ್ ಈ ಪರದಾ ಪದ್ಧತಿಯಿಂದ ಅವರ ಶರೀರದ ಮೇಲೆ ಪರಿಣಾಮ ಬೀರುತ್ತದೆ. ಆದರೆ ಕುರಾನಿನಲ್ಲಿ ಇದರ ನಿವಾರಣೆಗೆ ಯಾವುದೇ ಆಧಾರವಿಲ್ಲ ಅದೇರೀತಿ ಮುಸ್ಲಿಂ ಪರಿಷತ್ (ಕಾನೂನು)ನಲ್ಲೂ ಇದರ ಪ್ರಸ್ತಾಪವಿಲ್ಲ ಎಂದು ರೋಕೆಯಾ ವಿವರಿಸಿದರು.

ರೋಕೆಯ ರವರ ಈ ವಿಚಾರಧಾರೆ ಯಾರಿಗೂ ಹಿಡಿಸಲಿಲ್ಲ ಕ್ಯಾಥೋರಿನ್ ಮೇಯೋ ಅವರ 'ಮದರ್ ಇಂಡಿಯಾ' ಕಲ್ಪನೆಯನ್ನು ರೋಕೆಯಾ ಅವರು ಸಮರ್ಥಿಸಲು ಹೊರಟಾಗ ಜನರು ಅವರನ್ನು ಕ್ರಿಶ್ಚಿಯನ ಹಾಗೂ ಯುರೋಪಿನ ಚಿಂತನೆಗಳ ಪ್ರಚಾರಕಿ ಎಂದು ಬೈದರು. ಆದರೆ ಅವರ ಶಾಲೆ ಮಾತ್ರ ತಡೆಇಲ್ಲದೆ ನಡಯುತ್ತಿತ್ತು. ಒಳ್ಳೆಯ ಸಂಸಾರಸ್ಥ ಮನೆಗಳಿಂದ ಮುಸ್ಲಿಂ ಹುಡುಗಿಯರು ಈ ಶಾಲೆಗೆ ಬರುತ್ತಿದ್ದರು. ಸ್ತ್ರೀಶಿಕ್ಷಣ ಅಲಕ್ಷಿಸಿದರೆ ಇಸ್ಲಾಂ ಸಂಸ್ಕೃತಿಗೆ ಪೆಟ್ಟು ಬೀಳುತ್ತದೆ, ಎಂದು ಪ್ರಚಾರ ಪಡಿಸಿದ ಅವಳ ಮಾತಿಗೆ ಜನರು ಪ್ರತಿಕ್ರಿಯಿಸಿದರು. (ಶ್ರೀ ಮತಿ ಎಚ್.ಎಸ್ (ಸಂ), ೨೦೦೧, ಪು.ಸಂ ೮೧).

ಇವರ ಅಭಿಪ್ರಾಯ ಗಮನಿಸಿದರೆ ರೋಖೆಯರವರು ಸ್ತ್ರೀ ಶಿಕ್ಷಣಕ್ಕೆ ಹೆಚ್ಚಿನ ಆಧ್ಯತೆನೀಡಿದರು. ಅದೇ ರೀತಿ ಮಹಿಳೆಯರ ಸ್ವತಂತ್ರತೆಯ ಬಗ್ಗೆ ಹೆಚ್ಚು ಒಲವು ತೋರಿಸಿದರು, ಪರದಾ ಪದ್ದತಿಯನ್ನು ವಿರೋದಿಸಿದರು.

ನಮ್ಮ ಬಹುಧರ್ಮೀಯ ಸಮಾಜದಲ್ಲಿ ಪರಸ್ಪರ ಧರ್ಮಗಳ ಬಗ್ಗೆ ಜನರ ಧೋರಣೆಗಳು ಆ ಮೂಲವಾಗಿ ಬದಲಾಗದೆ ಧರ್ಮದಿಂದಾಗುವ ಕೆಲವು ಶೋಷಣೆಗಳು ಬದಲಾಗದು. ಪ್ರಸ್ತುತ ಎದುರಿಸುತ್ತಿರುವ ಗಂಭೀರ ಸಮಸ್ಯೆ ನಿವಾರಣೋಪಾಯಗಳನ್ನು ತುರ್ತಾಗಿ ಆಲೋಚಿಸಬೇಕು. ಮಕ್ಕಳನ್ನು ಮಾನಸಿಕವಾಗಿ ಪಕ್ವಗೊಳಿಸಿ ಇಂತಹ ನಿರೀಕ್ಷಿತ ಪ್ರಕಾರಗಳನ್ನು ಎದುರಿಸಲು ಅವರನ್ನು ಭೌತಿಕವಾಗಿ ಸಜ್ಜುಗೊಳಿಸುವ ಕಾರ್ಯಕ್ಕೆ ಮನೆಯಷ್ಟು ಪ್ರಶಸ್ತ ಸ್ಥಳ ಬೇರೆಯಿಲ್ಲ.

ಸಮಾಜವು ಧರ್ಮದ ಬಗೆಗಿನ ದುರ್ವ್ಯಾಖ್ಯಾನಗಳು ಮತ್ತು ಮೂಢನಂಬಿಕೆಗಳು ವಿಶೇಷವಾಗಿ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಅಡ್ಡಿಯಾಗದಂತಾಗಲು ಸಂಬಂಧ ಪಟ್ಟ ಧಾರ್ಮಿಕ ವಿಷಯಗಳ ಬಗ್ಗೆ ಮುಕ್ತವಾದ ಅಭಿಪ್ರಾಯ ಸಮಾಜ ತೆಗೆದುಕೊಳ್ಳಬೇಕು (ಮಹಮ್ಮದ್ ಕುಳಾಯಿ, ಶರ್ಫುದ್ದೀನ್ ಬಿ.ಎನ್., ಅಕ್ಬರ್ ಅಲಿ, ೨೦೦೦, ಪು.ಸಂ.೭೫). ಸ್ತ್ರೀಯ ಶಿಕ್ಷಣವು ಇಂದು ಅನಿವಾರ್ಯವಾಗಿದ್ದು ಸ್ತ್ರೀಶಿಕ್ಷಣದ ಕುರಿತಾದ ಎರಡನೆ ದರ್ಜೆಯ ನೋಟ ಮುಸ್ಲಿಂ ಸಮುದಾಯದಿಂದ ಮಾಯವಾಗಬೇಕು. ಒಬ್ಬಳು ಸ್ತ್ರೀಯು ಶಿಕ್ಷಿತಳಾದರೆ ಒಂದು ಸಮುದಾಯ ಶಿಕ್ಷಿತವಾದಂತೆ ಎಂಬ ಮಾತಿನ ಮಹತ್ವವನ್ನು ಮುಸ್ಲಿಂ ಸಮುದಾಯ ಕೂಡಲೇ ಅರಿಯಬೇಕಾಗಿರುವ ಅನಿವಾರ್ಯತೆ ಇದೆ. (ಮಹಮ್ಮದ್ ಕುಳಾಯಿ, ಶರ್ಫುದ್ದೀನ್ ಬಿ.ಎನ್., ಅಕ್ಬರ್ ಅಲಿ, ೨೦೦೦, ಪು.ಸಂ. ೯೬-೯೭).

ಮಸೀದಿಯಂತೆ ಶಾಲೆ ಕೂಡ ಸಮುದಾಯದ ಅಗತ್ಯ ಹಾಗೂ ಧಾರ್ಮಿಕ ಶಿಕ್ಷಣದಂತೆಯೇ ಸಾಮಾನ್ಯ ಶಿಕ್ಷಣ ಕೂಡ ಗೌರವಾರ್ಹ ಮತ್ತು ಅವಶ್ಯಕ ಎಂಬ ತಿಳುವಳಿಕೆ ಮೂಡಿಸಲು ಶ್ರಮಿಸಬೇಕು ಅಂದಾಗ ಸಾಮಾನ್ಯ ಶಿಕ್ಷಣಕ್ಕೆ ಮಹತ್ವ ಬರುತ್ತದೆ. (ಮಹಮ್ಮದ್ ಕುಳಾಯಿ, ಶರ್ಫುದ್ದೀನ್ ಬಿ.ಎನ್., ಅಕ್ಬರ್ ಅಲಿ, ೨೦೦೦, ಪು.ಸಂ.೭೫).

### ಉಲ್ಲೇಖಗಳು


೧. ಓಬಳೇಶ್ ಘಟ್ಟಿ, ೧೯೯೨, ಭಾರತಿಯ ಶಿಕ್ಷಣ ಮತ್ತು ಪ್ರಚಲಿತ ಸಮಸ್ಯೆಗಳು, ತೋರಣ ಘಟ್ಟ, ಶಿವಗಂಗಾ ಪ್ರಕಾಶಾನ.

೨. ಮಹಮ್ಮದ್ ಕುಳಾಯಿ, ಶರ್ಫುದ್ದೀನ್ ಬಿ.ಎನ್, ಅಕ್ಬರ ಅಲಿ, ೨೦೦೦, ಶಿಕ್ಷಣ ಮತ್ತು ಮುಸ್ಲಿಮರು, ಮಗಳೂರು, ಮುಸ್ಲಿಂ ಲೇಖಕರ ಸಂಘ.

೩. ರೆಹೆಮತ್ ತರಕೇರಿ (ಸಂ), ೨೦೦೦ ,ಧರ್ಮ,ಕನ್ನಡ ವಿಶ್ವವಿದ್ಯಾಲಯದ ವಿಶ್ವಕೋಶ:೩ ಮಾಧವ ಪೇರಾಜೆ, ವೆಂಕಟೇಶ್ ಇಂದ್ವಾಡಿ, ಬೆಂಗಳೂರು, ಕೈಲಾಸ್ ಪ್ರಿಂಟರ್ಸ್.

೪. ರೇಣುಕಾ ಜಿ.ಎಸ್, ೨೦೦೪, ಶಿಕ್ಷಣದ ಬುನಾದಿ, ತುಮಕೂರು, ಶಿವಾರ್ಜಿತ ಪ್ರಕಾಶನ.

೫. ಶ್ರೀಮತಿ ಎಚ್.ಎಸ್, ೨೦೦೧, ಆಧುನಿಕ ಭಾರತದಲ್ಲಿ ಮಹಿಳೆ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪ್ರಸಾರಂಗ.

೫

## ಶಿಕ್ಷಣ ಹರಡುವಿಕೆಯಲ್ಲಿ ಲಿಂಗದ ಪಾತ್ರ

ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಮಹಿಳಾ ಶಿಕ್ಷಣವನ್ನು ಸಾರ್ವತ್ರಿಕವಾಗಿ ಮಾನ್ಯ ಮಾಡಿರಲಿಲ್ಲ. ಭಾರತೀಯ ಧಾರ್ಮಿಕ ಸಾಂಸ್ಕೃತಿಕ ಮತ್ತು ಸಮಾಜಿಕ ನಂಬಿಕೆಗಳನ್ನು ಮತ್ತು ಮೌಲ್ಯಗಳು ಹಾಗೂ ಆಚರಣೆಗಳು ಮಹಿಳೆಯನ್ನು ಶಿಕ್ಷಣದಿಂದ ದೂರವೇ ಇಟ್ಟಿದ್ದವು. ಮಹಿಳಾ ಶಿಕ್ಷಣವು ಮಹತ್ವದೆಂದಾದರೆ ಏಕೆ ಪುರುಷರಿಗೆ ಹೋಲಿಸಿದರೆ ಮಹಿಳೆಯರು ಕಡಿಮೆ ಸಾಕ್ಷರರೂ ಆಗಿದ್ದಾರೆ. ಶಿಕ್ಷಣದಲ್ಲಿ ಲಿಂಗ ವ್ಯತ್ಯಾಸಗಳು ಏಕೆ ಇವೆ. ಈ ಪ್ರಶ್ನೆಗಳಿಗೆ ಉತ್ತರವನ್ನು ಹುಡುಕಲು ಕಳೆದ ಎರಡು ದಶಕಗಳಿಂದ ಸಂಶೋಧನೆ ನಡೆಯುತ್ತಿದೆ. (ಓಬಳೇಶ್, ೧೯೯೨, ಪು.ಸಂ. ೭೩-೭೪).

ಇಸ್ಲಾಮ್ ಧರ್ಮದಲ್ಲಿ ಮಹಿಳೆಯನ್ನು ಜೈವಿಕತೆಯ ಜೊತೆಗೆ ವಿವಾಹದ ಮೂಲಕ ಯಾವರೀತಿ ಹೇಳುತ್ತದೆ. ಅದೇ ರೀತಿ ಖುರಾನ್‌ನಲ್ಲಿ ಮಹಿಳೆಯ ದೇಹ ಮತ್ತು ಮನಸ್ಸುಗಳ ಬಗ್ಗೆ ಯಾವ ರೀತಿ ಅರ್ಥೈಸಿದೆ. ಇದರಿಂದ ಮುಸ್ಲಿಂ ಮಹಿಳೆಯ ಸಮಾಜಿಕ ಸ್ಥಿತಿಗತಿಯ ಮೇಲೆ ಯಾವ ಪರಿಣಾಮ ಬೀರಿವೆ ಎಂಬುದನ್ನು ಈ ಮುಂದಿನಂತೆ ವಿಶ್ಲೇಷಿಸಲಾಗಿದೆ.

ಮಹಿಳೆಯನ್ನು ವೈವಾಹಿಕ ಸಂಸ್ಥೆಗೆ ಒಳಪಡಿಸುವುದು ಜೈವಿಕ ಕಾರಣಗಳಿಂದಲೇ ಅವಳ ಲೈಂಗಿಕತೆಯನ್ನು ನಿಯಂತ್ರಿಸುತ್ತ ವಿವಾಹ ಸಂಸ್ಥೆಯ ಮೂಲಕ ತನ್ನ ಸಂತಾನಾಭಿವೃದ್ಧಿಯನ್ನು ಹೊಂದುವ ಉದ್ದೇಶವನ್ನು ಪಿತೃ ಪ್ರದಾನ ಸಮಾಜ ಹೊಂದಿರುತ್ತದೆ ಅಂದರೆ ಇಲ್ಲಿ ಮಹಿಳೆಯ ಜೈವಿಕತೆಯ ಕುರಿತು ಇರುವ ಗ್ರಹಿಕೆಗಳೆ ಅವಳ ಸಮಾಜಿಕ ಸ್ಥಾನಮಾನಗಳನ್ನು ನಿರ್ಧರಿಸುತ್ತವೆ. ವಿವಾಹದ ಸಂಬಂಧ ಮಹಿಳೆಯನ್ನು ಕೌಟುಂಬಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ದುರ್ಬಲಳನ್ನಾಗಿಸುತ್ತದೆ. ಹೆಂಡತಿಯಾದವಳು ಗಂಡನ ಹಾಗೂ ಅವನ ಕುಟುಂಬದ ಇತರ ಸದಸ್ಯರ ದೌರ್ಜನ್ಯವನ್ನು ಹಿಂಸೆಯನ್ನು ಅನುಭವಿಸಬೇಕಾಗುತ್ತದೆ. ಕುಟುಂಬದೊಳಗೆ ನಡೆಯುವ ಆ ಬಗೆಯ ತಾರತಮ್ಯ ಹಾಗು ಹಿಂಸೆಗಳನ್ನು ಖಾಸಗಿ ಎಂದು ಪರಿಗಣಿಸುವುದರಿಂದ ಮಹಿಳೆ ಇವರೊಂದಿಗೆ ಅನಿವಾರ್ಯವಾಗಿ ಒಪ್ಪಿಕೊಳ್ಳಬೇಕಾಗುತ್ತದೆ.

ಕುರಾನ ಮಹಿಳೆಗೆ ವಿಧಿಸಿರುವ ಬುರುಕಾದ ಬಗ್ಗೆ ಕುರಿತು ಏನನ್ನು ಮಾತನಾಡಿಲ್ಲ, ಆದರೆ ಶರಿಯತ್ ಇದನ್ನು ಕಡ್ಡಾಯಗೊಳಿಸಿದೆ. ಮಹಿಳೆಯರು ಮನೆಯಿಂದ ಹೊರಗೆ ಬರಬೇಕಾದರೆ

ಕಡ್ಡಾಯವಾಗಿ ತಲೆಯಿಂದ ಕಾಲಿನವರೆಗೂ ಬಿಳಿ ಅಥವಾ ಕಪ್ಪು ಬುರುಕಾ ಧರಿಸಬೇಕು ಎಂಬುದು ಕಡ್ಡಾಯವಾದ ನೀತಿ ಸಂಹಿತೆಯನ್ನು ತರುತ್ತದೆ. ಹೆಣ್ಣಿನ ದೇಹವನ್ನು ಮುಚ್ಚಿಡುವ ಈ ಪ್ರಕ್ರಿಯೆಯು ಮಹಿಳೆಯ ದೇಹದ ಕುರಿತು ನೇತಾತ್ಮಕವಾದ ಭಾವನೆಯನ್ನು ಬೆಳೆಸುತ್ತದೆ. ಬುರುಕಾ ಧರಿಸದೆ ಆಚೆಗೆ ಬಂದರೆ ಪುರುಷರು ಆಕೆಯನ್ನು ಕಾಮದ ದೃಷ್ಟಿಯಿಂದ ನೋಡುತ್ತಾರೆನ್ನುವ ಹೇಳಿಕೆ ಇದಕ್ಕೆ ಕಾರಣವಾಗಿದೆ. ಮಹಿಳೆಯರ ಅಸ್ಥಿತ್ವವನ್ನು ಇದು ನಿರಾಕರಿಸುತ್ತದೆ. ಮಹಿಳೆಯನ್ನು ಇದು ಶೃಂಗಾರ ಜೀವಿಯನ್ನಾಗಿ ಮಾತ್ರ ನಿರ್ವಹಿಸುತ್ತದೆ. ಅದರಾಚೆ ಅವಳ ದೇಹಕ್ಕೆ ಯಾವುದೇ ಮಾನ್ಯತೆ ಇಲ್ಲ ಎಂಬ ಸಂಗತಿಯನ್ನು ನಿರೂಪಿಸುತ್ತದೆ. ಮಹಿಳೆಯ ಅಂಗವು ಪತಿಗೆ ಮಾತ್ರ ಸೀಮಿತವಾಗಿದ್ದು ಅವನನ್ನು ಹೊರತುಪಡಿಸಿ ಉಳಿದ ವರಾರು ನೋಡಬಾರದು ಎಂಬ ವಿಧಿ ಅವಳನ್ನು ವೈವಾಹಿಕ ಸಂಸ್ಥೆಯ ಮೂಲಕ ಖಾಸಿಗಿ ಆಸ್ಥಿಯಾಗಿ ಪರಿಗಣಿಸಿದ ಸತ್ಯ ತಿಳಿದುಬರುತ್ತದೆ. ಅವಳ ದೇಹದ ಮೇಲೆ ಅವಳ ಹಕ್ಕನ್ನು ಇಸ್ಲಾಂ ಧರ್ಮವು ನಿರಾಕರಿಸುತ್ತದೆ.



ಇಸ್ಲಾಮ್ ಧರ್ಮ ಮಹಿಳೆಯ ಋತು ಚಕ್ರದ ಕುರಿತು ಏನನ್ನು ಹೇಳುತ್ತದೆ ಎಂಬುದನ್ನು ಅರಿಯುವ ಅಗತ್ಯವಿದೆ. ``ಅದೊಂದು ರೀತಿಯಲ್ಲಿ ಮಾಲಿನ್ಯಕರವಾದಂತಹ ಸ್ಥಿತಿಯಾಗಿರುವ ಕಾರಣ ಸ್ತ್ರೀಯರಿಂದ ದೂರವಿರಬೇಕು`` (ಕುರಾನ್ ೨೨.೬೧). ಹೆಣ್ಣಿನ ಋತುಚಕ್ರವು ನೈಸರ್ಗಿಕ ಕ್ರಿಯೆಯಾಗಿದ್ದು ಅದು ಅವಳ ಫಲವಂತಿಕೆಯನ್ನು ಹೇಳುತ್ತಿರುತ್ತದೆ. ಫಲವಂತಿಕೆಯು ಸ್ತ್ರೀ ಶಕ್ತಿಯನ್ನು ಸಾಬೀತು ಪಡಿಸುವ ಸಂಗತಿಯಾಗಿದೆ. ಯಾವುದು ಮಹಿಳಾ ಬದುಕಿಗೆ ಶಕ್ತಿಯಾಗಿದೆಯೋ ಅದನ್ನು ಧರ್ಮಗಳು ಪಾಪ ಕರ್ಮಗಳಾಗಿ ಮಾಲಿನ್ಯಕರ ಸಂಗತಿಯನ್ನಾಗಿ ನಿರೂಪಿಸಲ್ಪಡುತ್ತದೆ. ಈ ಮೂಲಕ ಮಹಿಳೆಗೆ ತನ್ನ ಶಕ್ತಿಯುತ ನಂಬಿಕೆಯನ್ನು ಕಳೆದು ಕೊಳ್ಳುವಂತೆ ಮಾಡುತ್ತದೆ. ಅದರ ಜೊತೆಗೆ ಕೀಳರಿಮೆಯನ್ನುಂಟುಮಾಡುತ್ತದೆ.

``ನಿಮ್ಮ ಸ್ತ್ರೀಯರು ನಿಮ್ಮ ಹೊಲಗಳಾಗಿರುತ್ತಾರೆ ನಿಮ್ಮ ಹೊಲಗಳಲ್ಲಿ ನಿಮಿಗಿ-ಷ್ಟಬಂದಂತೆ ಹೋಗುವ ಅಧಿಕಾರ ನಿಮಗಿದೆ`` (ಕರಾನ್ ೨೪೩.೬೨) ಎಂದು ಕುರಾನ ಮಹಿಳೆಯ ದೇಹವನ್ನ ಉಪಭೋಗದ ನೆಲೆಯಲ್ಲಿ ನಿರ್ವಹಿಸುತ್ತದೆ. ಫಲವು ಖಾಸಗಿ ಆಸ್ಥಿಯಲ್ಲಿ ಒಂದಾಗಿದೆ, ಫಲವು ಯಾರ ಹೆಸರಿನಲ್ಲಿರುತ್ತದೆಯೋ ಅದರ ಸಂಪೂರ್ಣ ಒಡೆತನ ಅವರದ್ದಾಗಿರುತ್ತದೆ. ಮಹಿಳೆಯನ್ನು ಹೊಲಕ್ಕೆ ಹೋಲಿಸಿದ್ದರಿಂದ ಮುಸ್ಲೀಂ ಧರ್ಮದಲ್ಲಿನ ಪಿತೃಪ್ರಧಾನ ವ್ಯವಸ್ಥೆಯು ಅವಳನ್ನು ಖಾಸಗಿಯಾದ ಸ್ತ್ರೀ

ಎಂದೆ ಪರಿಗಣಿಸಿದೆ. ಮಹಿಳೆಯ ದೇಹವು ಪುರುಷಾಧಿಕಾರದಲ್ಲಿ ಇರುವುದನ್ನು ಕುರಾನ್ ಸಮರ್ಥಿಸಿದೆ. ಕುರಾನ್ ಪುರುಷರಿಗೆ ಸ್ತ್ರೀಯರ ಮೇಲೆ ಹಕ್ಕಿರುವಂತೆ ಸ್ತ್ರೀಯರಿಗೂ ಪುರುಷರ ಮೇಲೆ ಹಕ್ಕಿದೆ ಎಂದು ಹೇಳುತ್ತದೆ. ಒಂದು ಕಡೆ ಸ್ತ್ರೀಪುರುಷರಿಬ್ಬರಲ್ಲಿ ಸಮಾನತೆ ಹಕ್ಕನ್ನು ಪ್ರತಿಪಾದಿಸುತ್ತದೆ. ಮತ್ತೊಂದೆಡೆ ಅವಳ ದೇಹದ ಮೇಲಿನ ಅಧಿಕಾರವನ್ನು ಪುರುಷನ ಕೈಯಲ್ಲಿ ಕೊಟ್ಟುಬಿಡುತ್ತದೆ. ಪುರುಷನಿಗೆ ಕೊಡುವ ಅಧಿಕಾರವು ಅವನನ್ನು ಪ್ರದಾನ ಸ್ಥಿತಿಯಲ್ಲಿ ಮಹಿಳರಯನ್ನು ಅಧೀನಸ್ಥಿತಿಯಲ್ಲಿರುವಂತೆ ಮಾಡಿದೆ.

ಮಹಿಳೆಯರು ದೇಹ ಮತ್ತು ಬುದ್ಧಿ ಎರಡರಲ್ಲೂ ಅತ್ಯಂತ ದುರ್ಬಲರು ಎಂದು ಹೇಳುವ ಧಾರ್ಮಿಕ ಚಿಂತನೆಗಳಲ್ಲಿ ಪುರುಷ ಮತ್ತು ಸ್ತ್ರೀಯರು ದೈಹಿಕ ಸಾಮರ್ಥ್ಯದ ಕುರಿತು ಕೆಲವು ಸಮಾಜಿಕ ನಂಬಿಕೆಗಳಿವೆ. ಪುರುಷನು ಧೈರ್ಯಶಾಲಿ, ಬುದ್ಧಿವಂತ, ವಿಚಾರವಂತ, ಬಲಾಢ್ಯ ಪುರುಷನ ಜೈವಿಕತೆಯನ್ನು ಅನುಸರಿಸಿ ಮಾನಸಿಕ ಸ್ಥಿತಿಯನ್ನು ಇತ್ಯಾತ್ಮಕವಾಗಿ ಕಟ್ಟಿಕೊಡಲಾಗಿದೆ. ಹೆಣ್ಣಿನ ಋತುಚಕ್ರ, ಗರ್ಭಧಾರಣೆ ಹೆರಿಗೆ ಮೊದಲಾದ ಸಂಗತಿಗಳನ್ನು ಗಮನ ದಲ್ಲಿಟ್ಟು ಕೊಂಡು ಅವಳನ್ನು ದುರ್ಬಲೆ ಯನ್ನಾಗಿ ಬುದ್ಧಿಹೀನಳನ್ನಾಗಿ ಅಬಲೆಯನ್ನಾಗಿ ಕಟ್ಟಿಕೊಡಲಾಗಿದೆ. ಸ್ತ್ರೀಪುರುಷರ ಜೈವಿಕ ಸಂರಚನೆಯ ಕುರಿತು ಯಾವ ಯಾವ ಗ್ರಹಿಕೆಗಳು ಇವೆಯೋ ಆ ಗ್ರಹಿಕೆಗಳನ್ನು ಅನುಸರಿಸಿಯೆ ಅವರ ಮಾನಸಿಕ ಹಾಗೂ ಬೌದ್ಧಿಕ ಸ್ಥಿತಿಯನ್ನು ನಿರ್ವಹಿಸಲಾಗಿದೆ. ಮುಸ್ಲಿಂ ಧರ್ಮ ಹೇಳಿದ ದೇಹ ಮತ್ತು ಬುದ್ಧಿಯ ನಿರ್ವಚನಗಳು ಆ ಧರ್ಮದಲ್ಲಿ ಅವಳು ಹೊಂದಿರುವಂತಹ ಸಮಾಜಿಕ ಹಾಗೂ ಧಾರ್ಮಿಕ ಸ್ಥಾನಮಾನವನ್ನು ಸೂಚಿಸುತ್ತದೆ ಹೆಣ್ಣಿನ ಮತ್ತು ಋತು ಚಕ್ರ ಮೈಲಿಗೆಯಾಗಿ ಪರಿಗಣಿಸುತ್ತದೆ ಈ ಕಾರಣದಿಂದ ಮಹಿಳೆಯನ್ನು ಧಾರ್ಮಿಕ ಕಾರ್ಯಗಳಿಂದ ದೂರವಿಡಲಾಗಿದೆ. ಎಂದು ಪುರುಷನ ರಾಜಕಾರಣವನ್ನು ಸಮರ್ಥಿಸಿಕೊಂಡಿದೆ. ಮುಸ್ಲಿಂ ಪುರುಷನು ಧಾರ್ಮಿಕ ಅಧಿಕಾರವು ಪಡೆಯುವುದರ ಜೊತೆಗೆ ಸಮಾಜಿಕ ಅಧಿಕಾರವನ್ನು ಸಹ ಪಡೆದುಕೊಂಡಿದ್ದಾನೆ ಅದರೆ ಹೆಣ್ಣು ಎಂಬ ಕಾರಣಕ್ಕಾಗಿ ಮುಸ್ಲಿಮ್ ಮಹಿಳೆ ದಾರ್ಮಿಕ ಅಧಿಕಾರದ ಜೊತೆ ಜೊತೆಗೆ ಸಮಾಜಿಕ ಅಧಿಕಾರವನ್ನು ಸಹ ಕಳೆದು ಕೊಳ್ಳು ತ್ತಾಳೆ.

## ಇಸ್ಲಾಂ ಧರ್ಮದಲ್ಲಿ ವಿವಾಹ

ವಿವಾಹ ಸಂಸ್ಥೆಯು ಪಾತಿವೃತ್ಯವನ್ನು ಕೇಂದ್ರವಾಗಿಟ್ಟುಕೊಂಡು ಹುಟ್ಟಿಕೊಂಡಿದೆ. ಈ ಸಂಸ್ಥೆಯು ಹೆಣ್ಣಿನ ಪಾವಿತ್ರತೆ ಮತ್ತು ವಿದೇಯತೆಯನ್ನು ನೀರಿಕ್ಷಿಸುತ್ತಿರುತ್ತದೆ. ಮುಸ್ಲಿಂರಲ್ಲಿ ವಿವಾಹ ಎನ್ನುವುದು ಲೈಂಗಿಕ ಆಸಕ್ತಿಯ ಈಡೇರಿಕೆ ಮತ್ತು ಸಂತತಿಯ ಮುಂದುವರೆಯುವಿಕೆಯಾಗಿದೆ. ಎಂದು ವ್ಯಾಖ್ಯಾನಿಸಿದ್ದಾರೆ.

ಒಟ್ಟಿನಲ್ಲಿ ವಿವಾಹ ಎಂಬುದು ಹೆಣ್ಣು ಮತ್ತು ಗಂಡಿನ ಸಂಬಂಧಕ್ಕೆ ಶಾಶ್ವತವಾದ ಸ್ವರೂಪವನ್ನು ನೀಡುತ್ತಿರುತ್ತದೆ. ಅದಕ್ಕೆ ಕೌಟುಂಬಿಕ ರಚನೆಯನ್ನು ನೀಡಿ ವ್ಯಕ್ತಿಗಳನ್ನು ಅದರೊಳಗೆ ಬಂಧಿಸಿರುತ್ತದೆ. ಇದರೊಳಗೆ ನಿಜಕ್ಕೂ ಬಂಧಿ ಯಾಗುವವರು ಹೆಣ್ಣುಮಾತ್ರ.

ವಿವಾಹವೆನ್ನುವ ಸಂಸ್ಥೆಯು ಸ್ತ್ರೀಯರಿಂದ ಲೈಂಗಿಕ ನಿಷ್ಠೆಯನ್ನು ಬಲವಾಗಿ ನಿರೀಕ್ಷಿಸುತ್ತದೆ. **ಇಂದಿರಾ** ಅವರ ಪ್ರಕಾರ ವಿವಾಹ ಸಂಸ್ಥೆ ಎಂಬ ಸಂಬಂಧ ಏರ್ಪಟ್ಟಿರುವುದರಿಂದ ಒಪ್ಪಿಗೆ ಇರುವ ವ್ಯಕ್ತಿಗಳೂ ಅವರವರ ವಯಸ್ಸು ಲಿಂಗ ಮತ್ತು ಮಾರ್ಪಟ್ಟಿರುವ ಸಂಬಂಧದ ಸ್ವರೂಪದ ಆಧಾರದ ಮೇಲೆ ಅವರಿಗೆ ಬೇರೆ ಬೇರೆಯಾದ ಪಾತ್ರಗಳನ್ನು ವಿವಾಹ ಎನ್ನುವ ಸಾಂಸ್ಥಿಕ ಚೌಕಟ್ಟಿನೊಳಗೆ ನಿರ್ವಹಿಸಲಾಗುತ್ತದೆ. ಈ ಪಾತ್ರ ಹಂಚಿಕೆಯ ಪಾತ್ರ ಬಹುತೇಕ ಸಂದರ್ಭಗಳಲ್ಲಿ ಸ್ತ್ರೀಪುರುಷ ನಡುವೆ ಈಗಾಗಲೇ ಇರುವಂತಹ ಅಸಮಾನತೆಯನ್ನು ಇನ್ನಷ್ಟು ಬಲಗೊಳಿಸುವುದರ ಜೊತೆಗೆ ಸ್ತ್ರೀ ಯರಿಂದಲೇ ವಿಶೇಷವಾದಂತಹ ನಡುವಳಿಕೆಯನ್ನು ನಿರೀಕ್ಷಿಸುತ್ತದೆ ವಿವಾಹದ ಅನೇಕ ಆಚರಣೆಗಳು ಕೂಡ ವಿವಾಹವಾಗಲಿರುವ ಸ್ತ್ರೀ ಪುರುಷರ ಹಾಗೂ ಅವರ ಸಂಬಂಧಗಳನ್ನು ಪ್ರಾಧನ್ಯತೆ ಪರಾಧೀನತೆಯ ವರ್ತುಲದಲ್ಲಿ ಸಿಲುಕಿಸಿ ಹಾಕಿಸುತ್ತದೆ.(ಸಂಪ್ರಭಂದ, ಕನ್ನಡವಿಶ್ವವಿದ್ಯಾಲಯ ಹಂಪಿ, ಸಿರಿಗನ್ನಡ).

ಮುಸ್ಲಿಂ ಧರ್ಮದ ಕಾನೂನಿನ ದೃಷ್ಟಿಯಲ್ಲಿ ನೋಡಿದರೆ ಸ್ತ್ರೀಯರ ಸ್ಥಾನಮಾನವನ್ನು ಅತ್ಯಂತ ಬಲಿಷ್ಠ ಗೊಳಿಸಲಾಗಿದೆ. ಆಕೆ ಸಮಾಜದಲ್ಲಿ ಶೋಷಿತ ಹಾಗೂ ಅಸಾಯಕಳಾಗಿರಬಾರದು ಮತ್ತು ಹಸಿವು ಬಡತನದಲ್ಲಿ ಸಿಲುಕಬಾರದೆಂದು ವ್ಯವಸ್ಥೆಮಾಡಿದೆ. ಆಕೆಗೆ ಭಾಷಣ ಮತ್ತು ಬರವಣಿಗೆಗೆ ಸ್ವತಂತ್ರವಿದೆ. ರಾಷ್ಟ್ರದ ಎಲ್ಲಾಸಂಪತ್ತು ಅಥವಾ ಸಂಪನ್ಮೂಲಗಳಿಂದ ಪುರುಷ ಪ್ರಯೋಜನ ನಡೆಯುವಂತೆ ಸ್ತ್ರೀಯರು ಅವುಗಳಿಂದ ಪ್ರಯೋಜನ ಪಡೆಯುವಳು. ತಂದೆ, ತಾಯಿ, ಪತಿ ಮತ್ತು

ಆಡಳಿತಾಧಿಕಾರಿಗೆ ಕೂಡ ಆಕೆಯ ಮುಂದೆ ಯಾವುದೇ ಕಾನೂನು ಬಾಹಿರ ಬೇಡಿಕೆಯನ್ನಿಡುವ ಅನುಮತಿ ಇಲ್ಲ.(ಇಬ್ರಾಹೀಮ್ ಸಈದ,೧೯೯೭, ಪು.ಸಂ.೨೭). ಇಸ್ಲಾಂ ಗಿಂತ ಮೊದಲು ಮಹಿಳೆಯ ಸ್ಥಿತಿಯು ತುಂಬಾ ಶೋಚನೀಯವಾಗಿತ್ತು ಮಹಿಳೆಯನ್ನು ಒಂದು ಉಪಭೋಗದ ವಸ್ತು ವೆಂದು ಭಾವಿಸಲಾಗಿತ್ತು. ನಾಗರಿಕತೆಯಲ್ಲಿ ಅಡಚಣೆಗಳನ್ನುಂಟುಮಾಡುವ ವರ್ಗವೆಂದು ಬಗೆದು ಆಕೆಯನ್ನು ಸಮಾಜಿಕ ಕಾರ್ಯರಂಗ ದಿಂದ ದೂರ ಸರಿಸಲಾಗಿತ್ತು. ಆಕೆಯನ್ನು ಅವನತಿಯ ಪಾತಳಕ್ಕೆ ತಳ್ಳಲಾಗಿತ್ತು ಅದರ ನಂತರ ಮಹಿಳೆಯ ಪ್ರಗತಿಯು ಯಾವ ನಿರೀಕ್ಷೆಯೂ ಇರಲಿಲ್ಲ(ಇಬ್ರಾಹೀಮ್ ಸಈದ,೧೯೯೭, ಪು.ಸಂ.೩೩). ಹೆಣ್ಣು ಹುಟ್ಟಿದರು ದುಃಖ:ದ ಸಂಗತಿ ಕೆಟ್ಟಸುದ್ಧಿ ಎಂದು ಬಾವಿಸುತ್ತಿದ್ದರು ಸ್ತ್ರೀಯರ ಬಗ್ಗೆ ವಾತ್ಸಲ್ಯ ಕರುಣೆಯಭಾವನೆ ಇರಲಿಲ್ಲ ಹೆಣ್ಣು ಮಗುವನ್ನು ಜೀವಂತವಾಗಿ ಹೂಳಿ ಬಿಡುತ್ತಿದ್ದರು (ಪವಿತ್ರ ಕುರ್‌ಆನ್:೧೬:೫೮-೫೯) ಈ ವರ್ತನೆಗಳ ಬಗ್ಗೆ ಇಸ್ಲಾಮರ ಪ್ರತಿಭಟನೆಗಳು ನಡೆದವು ಜೀವನವು ಪುರುಷ ಮತ್ತು ಸ್ತ್ರೀ ಇಬ್ಬರನ್ನು ಅವಲಂಬಿಸಿ ಎಂಬುದು ಪ್ರತಿಭಟನೆಗಳು ತಿಳಿಸಿದವು. ಮುಸ್ಲಿಂ ಧರ್ಮದಲ್ಲಿ ಧರ್ಮದ ಮೂಲ ತತ್ವಗಳ ಪಾಲನೆ ಕೇವಲ ಪುರುಷರು ಮಾಡಿದರೆ ಸಾಲದು ಮಹಿಳೆಯರೂ ಸಹ ಮಾಡಬೇಕು. (ಇಬ್ರಾಹೀಮ್ ಸಈದ,೧೯೯೭, ಪು.ಸಂ.೯-೧೦).

ಮುಸ್ಲಿಂ ಮಹಿಳೆಯರಿಗೆ ಅವಳ ನೈಜ ಶಿಕ್ಷಣ ಮತ್ತು ತರಬೇತಿಯ ಕೇಂದ್ರ ಆಕೆಯಮನೆಯೇ ಆಗಿತ್ತು. ಈಗಲೂ ಇದಕ್ಕೆಮಾನ್ಯತ ಇದೆ ಔಪಚಾರಿಕ ಶಿಕ್ಷಣ ಕೊಡುವಲ್ಲಿ ಮುಸ್ಲಿಂಧರ್ಮ ಅವಳಿಗೆ ಒಲವು ತೋರಿಸುತ್ತಿಲ್ಲ. (ಇಬ್ರಾಹೀಮ್ ಸಈದ,೧೯೯೭, ಪು.ಸಂ.೫೭).

ಆದರೆ ಸ್ವತಂತ್ರದ ನಂತರ ಮುಸ್ಲಿಂ ಮಹಿಳೆಯರ ಶೈಕ್ಷಣಿಕ ಸ್ಥಿತಿಯು ಇತರ ಸಮುದಾಯದಲ್ಲಿರುವಂತಿದೆ. ಮುಸ್ಲಿಮರಲ್ಲಿ ಶಿಕ್ಷಣವನ್ನು ಉದ್ಯೋಗಕ್ಕೆ ಗಂಟು ಹಾಕುವ ಮನೋವೃತ್ತಿಯನ್ನು ಹೊಂದಿದೆ ಕುಟುಂಬದ ಜೀವನದಲ್ಲಿ ಇಸ್ಲಾಂ ಧರ್ಮವು ಮಾಡಿರುವ ಕಾರ್ಯ ವಿಂಗಡಣೆ ಪ್ರಕಾರ ಧನ ಸಂಪಾದನೆ ಗಂಡಿನ ಹೊಣೆಗಾರಿಕೆ ಆದರೆ ಹೆಣ್ಣಿನದಲ್ಲ ಶಿಕ್ಷಣದ ಉದ್ದೇಶ ಉದ್ಯೋಗ ಅಥವಾ ಧನ ಸಂಪಾದನೆ ಮಾತ್ರ ಬಗೆಯುವವರು ಹೆಣ್ಣು ಉದ್ಯೋಗ ಮಾಡಬೇಕಾಗಿಲ್ಲ ಎನ್ನುವರು ಇಸ್ಲಾಂ ದರ್ಮವು ಮಹಿಳೆಗೆ ಕೇವಲ ಕುಟುಂಬದ ರಕ್ಷಣೆ ಮತ್ತು ಮಕ್ಕಳ ಪಾಲನೆ ಪೋಷಣೆಯನ್ನು ವಹಿಸಿಕೊಟ್ಟಿದೆ.

ಮುಸ್ಲಿಮ ಸಮುದಾಯದಲ್ಲಿ ಇವರು ಆರ್ಥಿಕವಾಗಿ ತುಂಬಾ ಹಿಂದುಳಿದಿದ್ದಾರೆ ತೀವ್ರವಾದ ಬಡತನದಿಂದಾಗಿ ಮತ್ತು ತೀವ್ರ ಆರ್ಥಿಕ ಅಗತ್ಯಗಳಿಗಾಗಿ ತಮ್ಮ ಮಕ್ಕಳನ್ನು ಆರು ಏಳು ಕ್ಲಾಸುಗಳವರೆಗೆ ಶಿಕ್ಷಣ ಕೊಟ್ಟು ನಂತರ ಶಾಲೆ ಬಿಡಿಸಿ ಗ್ಯಾರೇಜು, ವರ್ಕಶಾಪ ಇತ್ಯಾದಿಗಳಿಗೆ ಸೇರಿಸುವರು. ಅವರಿಗೆ ಒಂದೊತ್ತು ಊಟ ಕೊಟ್ಟರೆ ಸಾಕು ತಿಂಗಳಿಗೆ ತಮಗೆ ನೂರು ರೂಪಾಯಿ ಕೊಟ್ಟರೆ ಸಾಕು ಎಂದು ಬಗೆಯುವ ತಂದೆ ತಾಯಿಗಳು ಮುಸ್ಲಿಮ ಸಮಾಜದಲ್ಲಿ ಸಾಕಷ್ಟು ಜನರಿದ್ದಾರೆ. ಇಂತಹ ಸಮಸ್ಯೆಗಳಿಗೆ ಕೇವಲ ಉಪನ್ಯಾಸ ನೀಡಿದರೆ ಸಾಲದು ಅದಕ್ಕೆ ಬಲಿಷ್ಠವಾದ ಆರ್ಥಿಕ ಯೋಜನೆಗಳೂ ಮತ್ತು ಅವುಗಳನ್ನು ಅನುಷ್ಠಾನಿಸ ಬಲ್ಲವರು ಬೇಕಾಗುತ್ತಾರೆ. (ಮಹಮ್ಮದ್ ಕುಳಾಯಿ, ಶರ್ಫುದ್ದೀನ್ ಬಿ.ಎಸ್., ಅಕ್ಬರ್ ಅಲಿ, ೨೦೦೦, ಪು.ಸಂ. ೬೯).

ಪ್ರಾಥಮಿಕ ಶಾಲೆಗೆ ಸಂಬಂಧಿಸಿದ ಸೌಲಭ್ಯಗಳಿಂದ ವಂಚಿತರಾದ ಮಹಿಳೆಯರಿಗೆ ಉನ್ನತ ಶಿಕ್ಷಣ ವೆಂಬುದು ಕೇವಲ ಗಗನ ಕುಸುಮ ವಾಗಿದೆ ವಿಜ್ಞಾನ ತಂತ್ರಜ್ಞಾನದಂತಹ ಪ್ರೌಢ ಅಧ್ಯಯನ ಕ್ಷೇತ್ರಗಳಲ್ಲಿ ಮಹಿಳೆಯರ ಪ್ರವೇಶ ಅತ್ಯಂತ ನಿಕೃಷ್ಟವಾಗಿದೆ. ಈ ಸಮಸ್ಯೆ ಕೇವಲ ಭಾರತಕ್ಕೆ ಮಾತ್ರ ಸಂಬಂಧಿಸಿಲ್ಲ ಇದು ಯುರೋಪ ಅಮೇರಿಕಾದಲ್ಲೂ ಉನ್ನತ ಶಿಕ್ಷಣ ಉನ್ನತ ಹುದ್ದೆಯಲ್ಲಿ ಮಹಿಳೆಯರ ಸಂಖ್ಯೆ ಅತ್ಯಂತ ಕಡಿಮೆ ಮುಸ್ಲಿಮರಿಗೆ ತಮ್ಮ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಸಂಬಂಧಿಸಿದಂತೆ ಕೆಲವು ಪ್ರಾಯೋಗಿಕ ಸಮಸ್ಯೆಗಳಿವೆ. ಸಮಾಜದಲ್ಲಿ ಬಹಳಷ್ಟು ಶಾಲೆಗಳು ಹುಡುಗ ಹುಡುಗಿಯರ ಜೊತೆ (Co-Education)ಯಾಗಿ ಕಲಿಯುವಂತಹ ಸಹಶಿಕ್ಷಣ ವ್ಯವಸ್ಥೆಇದೆ. ಏಳನೇ. ತರಗತಿಯವರೆಗೆ ಇಂತಹ ಶಾಲೆಗಳಿಗೆ ಹೆತ್ತವರು ತಮ್ಮ ಮಕ್ಕಳಿಗೆ ಕಳುಹಿಸಲು ಹಿಂಜರಿಯುವುದಿಲ್ಲ ಹೆಣ್ಣು ಮಕ್ಕಳು ಬೆಳೆದಂತೆ ಅವರಿಗೆ ಆತಂಕ ಹೆಚ್ಚುತ್ತದೆ. ಅದು ಕೇವಲ ಮುಸ್ಲಿಂ ಸಮುದಾಯದಲ್ಲಿ ಮಾತ್ರವಲ್ಲ ಸಮಾಜದ ಇತರ ಸಮುದಾಯದಲ್ಲಿಯು ಈ ತರದ ಅಭಿಪ್ರಾಯ ಇದೆ. ಉದಾಹರಣೆ ಮುಸ್ಲಿಮ ಸಮುದಾಯವು ಬುರ್ಖಾ ಪದ್ಧತಿಗೆ ಪ್ರಾಮುಖ್ಯತೆ ನೀಡುತ್ತದೆ ಯಾದ್ದರಿಂದ ಇದು ಮುಸ್ಲಿಮ ಸಮುದಾಯಕ್ಕೆ ಸೇರಿದ ಹುಡುಗಿಯರಿಗೆ ಹೆಚ್ಚಿನ ಸಮಸ್ಯೆ ಯಾಗುತ್ತದೆ.

ಆದಷ್ಟು ಬೇಗ ತಮ್ಮ ಮಗಳಿಗೆ ಮದುವೆ ಮಾಡಿ ತಮ್ಮ ಋಣ ಮುಗಿಸಿಕೊಳ್ಳಬೇಕು ಎನ್ನುವ ನಂಬಿಕೆಯಲ್ಲಿರುವವರು ೧೦ನೇ ತರಗತಿ ಮುಗಿದ ಕೂಡಲೇ ಹುಡುಗಿಗೆ ಶಾಲೆ ಬಿಡಿಸಿ ಮದುವೆ ಮಾಡುವುದು ಮುಸ್ಲಿಂರಲ್ಲಿ ಸಾಮಾನ್ಯವಾಗಿದೆ. ಹದಿನೆಂಟು ವಯಸ್ಸಿಗಿಂತ ಮುಂಚೆ ಮದುವೆ

ಮಾಡಿಸುವುದು ಕಾನೂನಿನ ರೀತಿಯಲ್ಲಿ ಅಪರಾದ ಮತ್ತು ಹೆಣ್ಣಿನ ಶರೀರ ಮನಸ್ಸು ಹಾಗೂ ಆಕೆಯ ಭವಿಷ್ಯದ ಮೇಲೆ ದುಷ್ಪರಿಣಾಮ ಬೀರುತ್ತದೆ. ಈ ಅಂಶಗಳನ್ನು ಪ್ರತಿಯೊಬ್ಬರಿಗೆ ಮನವಲಿಕೆ ಮಾಡಿ ಕೊಡ ಬೇಕಾಗುತ್ತದೆ. ಅದೇರೀತಿ ವಿವಾಹದ ನಂತರ ಕೌಟುಂಬಿಕ ಹೊಣೆ ಗಾರಿಕೆಗಳಿಗೆ ಆ ಹೆಣ್ಣು ಮಗಳನ್ನು ಮಾನಸಿಕವಾಗಿ ಸನ್ನದ್ದು ಗೊಳಿಸದೇ ತರಬೇತಿ ನೀಡಿದೆ ವಿವಾಹ ಮಾಡುವುದರಿಂದ ಅವಳ ಮೇಲೆ ಆಗಬಹುದಾದ ಅನಾಹುತಗಳ ಬಗ್ಗೆ ಜಾಗೃತಿ ಮೂಡಿಸಬೇಕು ಸಣ್ಣ ವಯಸ್ಸಿನಲ್ಲಿಯೇ ವಿವಾಹವಾಗುವದರಿಂದ ಪತಿ ಯಾವುದೇ ಕಾರಣಕ್ಕಾಗಿ ಸಾವಿಗೀಡಾದರೆ ಅವಳು ಮರು ವಿವಾಹ ಮಾಡಿಕೊಳ್ಳಲು ಕಾನೂನಿನಲ್ಲಿ ಅವಕಾಶ ನೀಡಿದರೂ ಅದಕ್ಕೆ ಸಮಾಜ ಹಿಂಜರಿಯುತ್ತಿತು. ಆದರೆ ಪುರುಷನು ತನಗಿಷ್ಟವಾದ ಮಹಿಳೆಯನ್ನು ನಾಲ್ಕು ಮಂದಿ ಪತ್ನಿಯರನ್ನು ಹೊಂದ ಬಹುದಾಗಿತ್ತು. (ಮಹಮ್ಮದ್ ಕುಳಾಯಿ, ಶರ್ಪುದ್ದೀನ್ ಬಿ.ಎಸ್., ಅಕ್ಬರ್ ಅಲಿ, ೨೦೦೦, ಪು.ಸಂ. ೭೦).

ಸಾಮಾಜಿಕ ಸಂಸ್ಥೆಯೇ ಲಿಂಗಾಧಾರಿತ ಅಸಮಾನತೆಯ ಮೇಲೆ ನಿಂತಿರುವುದರಿಂದ ಸದಸ್ಯರೊಳಗೆ ಅನೇಕ ಹೊಸಬಗೆಯ ಸಮಸ್ಯೆಗಳನ್ನು ಮಹಿಳೆಯರೇ ಎದುರಿಸಬೇಕಾಗುತ್ತದೆ. ಶಿಕ್ಷಣ ಉದ್ಯೋಗ ಆಸ್ತಿಯ ಹಕ್ಕುಗಳಿಗೆ ಸಂಬಂಧಿಸಿದಂತೆ ಹೆಚ್ಚಿನ ಅಧಿಕಾರ ಪುರುಷನಿಗಿದೆ ಕುಟುಂಬದ ಮನೆಯ ಎಲ್ಲಾಕೆಲಸ ಕಾರ್ಯಗಳನ್ನು ಮಾತ್ರ ಮಹಿಳೆ ಮಾಡಬೇಕಾಗಿದೆ. (ಶ್ರೀಧರ್ .ಎ., ಪ್ರಶಾಂತ್ ಎಚ್.ಡಿ, ೨೦೦೬, ಪು.ಸಂ.೧೪೯-೧೫೦).

ಮುಸ್ಲಿಂ ಸಮುದಾಯದಲ್ಲಿ ಶೈಕ್ಷಣಿಕ ವಿಷಯದಲ್ಲಿಯೂ ಕೂಡ ಲಿಂಗಾಧಾರಿತವಾದ ತಾರತಮ್ಯ ಮಾಡುವುದು ಕಂಡುಬರುತ್ತದೆ. ಪ್ರಾಥಮಿಕ ಹಂತದಲ್ಲಿ ಶಿಕ್ಷಣದ ಬಗ್ಗೆ ಕುರಿತು ಮಾತಾ ಪಿತೃಗಳ ದೃಷ್ಟಿಕೋನವೇ ಮಹತ್ವದ ಅಂಶವಾಗುತ್ತದೆ. ತಂದೆ ತಾಯಿಯರು ತಮ್ಮ ಮಕ್ಕಳ ಶಿಕ್ಷಣ ಕುರಿತು ವಿಭಿನ್ನ ದೃಷ್ಟಿಕೋನಗಳನ್ನು ತಳೆದಿರುವು ಶಿಕ್ಷಣ ಆಹಾರ ಹಂಚಿಕೆ ಅಥವಾ ಆಸ್ತಿಯ ವಿತರಣೆಗಳು ಗಂಡು ಮಕ್ಕಳ ಪರವಾಗಿರುವುದು ಹೆಣ್ಣು ಮಕ್ಕಳನ್ನು ಶಾಲೆಗೆ ಕಳುಹಿಸುವುದರಿಂದ ಅವರಿಂದ ದೊರಕುವ ನಿರೀಕ್ಷಿತ ಫಲಗಳು ಅವರ ಶಿಕ್ಷಣದ ವೆಚ್ಚಗಳನ್ನು ಮೀರದಿದ್ದರೆ ಆಗ ತಂದೆ ತಾಯಿಯರಿಗೆ ಮಕ್ಕಳ ಶಿಕ್ಷಣದ ಹೂಡಿಕೆ ಅನಾಕರ್ಷಕ ವಾಗುವುದು.

ಸಾರ್ವತ್ರಿಕವಾಗಿ ಗಮನಿಸಿದರೆ ಸ್ತ್ರೀಯರಲ್ಲಿಯೇ ಅನಕ್ಷರತೆಯು ಹೆಚ್ಚಾಗಿರುವುದು ಕಂಡುಬರುತ್ತದೆ. ಹೆಣ್ಣು ಮಕ್ಕಳ ಶಿಕ್ಷಣ ಮಟ್ಟವು ಕಡಿಮೆಯಾಗಿದ್ದಷ್ಟೂ ಅನಕ್ಷರಸ್ಥ ಹೆಣ್ಣು ಮಕ್ಕಳ

ಸಂಖ್ಯೆ ಹೆಚ್ಚಾಗುತ್ತದೆ. ಅವರ ಸ್ಥಾನ ಮಾನವು ಕನಿಷ್ಠ ಮಟ್ಟಕ್ಕಿಳಿಯುತ್ತದೆ.(ಡಾ. ಎ.ಶಶಿಕಲಾ, ರಾಧಾಮಣಿ.ಡಿ, ಡಾ.ಸುನಿತಾ ಸಿ.ಎನ್,೨೦೦೩, ಪು.ಸಂ.೧೮೮-೧೮೯).

ಮುಸ್ಲಿಮರಲ್ಲಿ ಬಹಳಷ್ಟು ಜನರು ತಮ್ಮ ಹೆಣ್ಣು ಮಕ್ಕಳಿಗೆ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ಮಾತ್ರ ನೀಡಲು ಹಿಂದೇಟು ಹಾಕುವರು ಇನ್ನೂ ಉನ್ನತ ಶಿಕ್ಷಣ ದೂರದ ಮಾತು ಒಂದು ವೇಳೆ ಶಿಕ್ಷಣ ಕೊಟ್ಟರು ಕೆಲವೇ ಕುಟುಂಬದಲ್ಲಿ ಮಾತ್ರ. ಆ ಕುಟುಂಬ ಆರ್ಥಿಕವಾಗಿ ಶೈಕ್ಷಣಿಕವಾಗಿ ಪ್ರಬಲವಾಗಿರಬೇಕು, ತಮ್ಮ ಹೆಣ್ಣು ಮಕ್ಕಳನ್ನು ಕಾಲೇಜಿಗೆ ಕಳುಹಿಸುವುವರು ತೀರಾ ಕಡಿಮೆ, ಒಂದು ವೇಳೆ ಕಳುಹಿಸಿದರೂ ಕಾಲೇಜಿಗೆ ಹೋಗುವ ತಮ್ಮ ಮಗಳ ಚಾರಿತ್ರ್ಯ ಬಗ್ಗೆ ಹೆತ್ತವರಲ್ಲಿ ತುಂಬಾ ಆತಂಕಗಳು ಹುಟ್ಟುತ್ತವೆ ಪ್ರತ್ಯೇಕ ಶಾಲೆಗಳು ಮತ್ತು ಕಾಲೇಜುಗಳನ್ನು ತೆರೆಯುವುದರಿಂದ ತಮ್ಮ ಮಕ್ಕಳ ಶಿಕ್ಷಣವು ಮುಂದುವರೆಯುತ್ತದೆ. ಎಂದು ಹೆತ್ತವರಿಗೆ ಪ್ರೇರಣೆ ಸಿಕ್ಕಂತಾಗುತ್ತದೆ. ಒಂದು ವೇಳೆ ತಮ್ಮ ಹೆಣ್ಣು ಮಕ್ಕಳಿಗೆ ಕಾಲೇಜಿಗೆ ಸೇರಿಸಿದರೆ ಎಲ್ಲಿ ಪರ್ದಾದ ನಿಬಂಧನೆ ಮುರಿಯುತ್ತಾಳೆ ಎಂಬ ಭಯ ಪ್ರತಿಯೊಬ್ಬ ಮುಸ್ಲಿಂ ತಂದೆ ತಾಯಿಯಲ್ಲಿ ಇರುತ್ತದೆ. ಒಂದುವೇಳೆ ಅವಳು ತನ್ನ ಶಿಕ್ಷಣವನ್ನು ಮುಂದುವರೆಸಬೇಕಾದರೆ. ಅವಳು ಬುರ್ಖಾವನ್ನು ಹಾಕಿಕೊಂಡು ಹೋಗಬೇಕು ಎಂದು ಅವಳ ತಂದೆ ತಾಯಿ ಕಟ್ಟಪ್ಪಣೆ ಮಾಡುವರು ಬುರ್ಖಾ ಬಿಟ್ಟರೆ ಅವಳಿಗೆ ಶಾಲೆ ಕಾಲೇಜನ್ನು ಬಿಡಿಸುವರು. ಅವಳಿಗೆ ಶಿಕ್ಷಣದಲ್ಲಿ ತುಂಬಾಆಸಕ್ತಿ ಇದ್ದರೆ ಅದನ್ನುಹಾಕಿಕೊಂಡಾದರು ಶಿಕ್ಷಣವನ್ನು ಮುಂದುವರೆಸುವಳು ಇಂತಹ ಉದಾಹರಣೆಗಳು ಸಾಕಷ್ಟು ಕಾಣಬಹುದು.

ಕೆಲವೊಂದು ಕುಟುಂಬದಲ್ಲಿರುವ ತಂದೆ ತಾಯಿಗಳು ಬುರ್ಖಾ ಹಾಕಿಸಲು ಇಷ್ಟ ಪಡುತ್ತಿಲ್ಲದ್ದಿದ್ದರು. ಸಮಾಜಕ್ಕೆ ಅಂಜಿಯಾದರೂ ಅವರು ಈ ನಿಯಮವನ್ನು ಪಾಲಿಸ ಬೇಕಾಗುತ್ತದೆ. ಆದರೆ ಪ್ರಸ್ತುತ ದಿನದಲ್ಲಿ ಬಹಳಷ್ಟು ಜನ ಮುಸ್ಲೀಮರು ಬುರ್ಖಾವನ್ನು ಬಿಟ್ಟು ವಿದ್ಯಾಭ್ಯಾಸ, ಉದ್ಯೋಗವನ್ನು ಮಾಡುವದು ಕಂಡುಬರುತ್ತಿದೆ.

ಕೆರಳಾದ ಮುಸ್ಲಿಂ ವಿಧ್ಯಾರ್ಥಿಯಾಗಲಿ ಶಿಕ್ಷಕಿಯರಾಗಲಿ ಬುರ್ಖಾವನ್ನು ಧರಿಸದೇ ತಾವು ಬಳಕೆಯ ಉಡುಗೆಗಳಲ್ಲಿಯೇ ಸ್ವಲ್ಪಮಟ್ಟಿಗೆ ಸುಧಾರಿ ಇಸ್ಲಾಂ 'ಹಿಜಾಬ್'. (ಪೂರ್ಣ ವಸ್ತ್ರದ) ಬೇಡಿಕೆಯನ್ನು ಈಡೇರಿಸಿಕೊಳ್ಳುವರು ಆದರೆ ಇವರ ಈ ನಿರ್ಣಯಕ್ಕೆ ಅಲ್ಲಿನವಿದ್ವಾಂಸರು ತಕರಾರು

ಮಾಡಿಲ್ಲ. (ಮಹಮ್ಮದ್ ಕುಳಾಯಿ, ಶರ್ಫುದ್ದೀನ್ ಬಿ.ಎನ್., ಅಕ್ಬರ್ ಅಲಿ, ೨೦೦೦, ಪು.ಸಂ. ೭೦-೭೧).

'ಆಡುವ ಹುಡುಗಿಗೊಂದು ಕಾಡುವ ಕೂಸು' ಎಂಬಂತೆ ಚಿಕ್ಕ ವಯಸ್ಸಿನಲ್ಲಿಯೇ ಆಗುವ ಮದುವೆಗಳಿಂದ ಹೆಣ್ಣು ಮಕ್ಕಳ ಸಂಸಾರಿಕ ತಾಪತ್ರಯ ಗೋಳು, ಅಲ್ಲಿಂದಲೇ ಪ್ರಾರಂಭಿಸುತ್ತವೆ. ಮದುವೆಯಾದ ನಂತರ ಹೆಣ್ಣು ಮಕ್ಕಳ ವಿದ್ಯಾಭ್ಯಾಸ ತಟಸ್ಥವಾಗುತ್ತದೆ. ಜೊತೆಗೆ ಗರ್ಭಿಣಿಯರಾಗಿ ಮಕ್ಕಳನ್ನು ಹೆತ್ತುಬಿಟ್ಟರಂತು ಶಾಲಾ ವಿದ್ಯಾಭ್ಯಾಸದಿಂದ ವಿಮುಖರಾಗುವರು.ಅನೇಕ ಹೆಣ್ಣು ಮಕ್ಕಳಸ್ಥಿತಿಯು ಇದೇರೀತಿ ಆಗಿದೆ. ಒಮ್ಮೊಮ್ಮೆ ವಿದ್ಯಾಭ್ಯಾಸ ಮುಂದುವರೆಸಲು ಪ್ರೋತ್ಸಾಹ ಸಿಕ್ಕರೂ ತಮ್ಮ ಮನೆಯ ಅಕ್ಕಪಕ್ಕದಲ್ಲಿ ಶಾಲಾ ಸೌಲಭ್ಯಗಳಿರದಿದ್ದರೆ ಅವರ ಶಿಕ್ಷಣಕ್ಕೆ ಕಲ್ಲು ಬಿತ್ತೆಂದರ್ಥವಾಗುತ್ತದೆ. ಹೀಗೆ ಮೂಲ ಶಿಕ್ಷಣದಿಂದಲೇ ವಂಚಿತರಾದವರು ಔದ್ಯೋಗಿಕ ಶಿಕ್ಷಣದ ವ್ಯವಸ್ಥೆ ಮಾಡಲಾರರು ಸಂಪಾದನೆ ಕಡಿಮೆ ಇರುವುದರಿಂದ ಹೆಣ್ಣುಮಕ್ಕಳು ಹೆಚ್ಚು ಶ್ರಮವಹಿಸಿ ದುಡಿದಾಗಲೂ ಸಂತೃಪ್ತಿ ತರುವ ಸಂಪಾದನೆ ಅವರದಾಗಿರುವದಿಲ್ಲ.

ಶಾಲೆಗೆ ಹೋಗದಿರುವ ಮತ್ತು ಶಾಲೆಬಿಟ್ಟ ಹೆಣ್ಣು ಮಕ್ಕಳ ಸಂಖ್ಯೆ ಲಿಂಗಧಾರಿತ ಬೇಧಭಾವವೇ ಮುಖ್ಯ ಕಾರಣ ಎಂಬುದು ತಿಳಿದು ಬರುತ್ತದೆ. ಇದಕ್ಕೆ ಕೆಲವೊಂದು ಕಾರಣಗಳನ್ನು ಗಮನಿಸಬಹುದು ಮನೆಗೆಲಸದ ಹೊರೆ ಎಳೆಯ ತಮ್ಮ ತಂಗಿಯರನ್ನು ನೋಡಿಕೊಳ್ಳುವ ಜವಬ್ದಾರಿ ಪೋಷಕರ ಅನಕ್ಷರತೆ ಚಿಕ್ಕ ವಯಸ್ಸಿನಲ್ಲಿ ಮದುವೆ ಪೋಷಕರ ಉದ್ಯೋಗದಲ್ಲಿ ಸಹಾಯ ನೀಡುವುದು ವಿದ್ಯಾಬ್ಯಾಸಕ್ಕೆ ಸರಿಯಾದ ಪ್ರೋತ್ಸಾಹ ದೊರೆಯದೇ ಇರುವುದು ಖಾಸಗಿ ಪಾಠ ಆಷೀಸಿನ ಶುಲ್ಕ ಕೊಡದೇ ಇರುವುದು ಸಮಾಜಿಕ ಕಟ್ಟುಪಾಡುಗಳು ಮನೆಯ ಹತ್ತಿರ ಶಾಲಾ ಸೌಲಭ್ಯಗಳು ಇಲ್ಲದೇ ಇರುವುದು ದುರ್ಬಲವಾದ ಆರೋಗ್ಯ ಪರಿಸ್ಥಿತಿ ಸಾಲದಕ್ಕೆ ಹೆಣ್ಣು ಮಕ್ಕಳ್ಳನ್ನು ಆರೋಗ್ಯದ ದೃಷ್ಟಿಯಿಂದ ಪುರುಷರಿಗೆ ನೀಡುವಷ್ಟು ಪ್ರಾಮುಖ್ಯಯತೆ ಮಹಿಳೆಗೆ ನೀಡುವುದಿಲ್ಲ. .(ಡಾ. ಎ.ಶಶಿಕಲಾ, ರಾಧಾಮಣಿ.ಡಿ, ಡಾ.ಸುನಿತಾ ಸಿ.ಎನ್,೨೦೦೩, ಪು.ಸಂ.೧೯೦-೧೯೧).

ಒಂದು ವೇಳೆ ಹೆಣ್ಣು ಮಕ್ಕಳು ಶಾಲೆಗೆ ಹೋದರೆ ಅವರು ದುಡಿಮೆ ಕಳೆದು ಕೊಳ್ಳುವರು ; ಮಕ್ಕಳ ಲಾಲನೆ ಪಾಲನೆ ಗೃಹಕೃತ್ಯ, ಕಲಿಕೆ, ಮಕ್ಕಳ ಪಾಲನೆ ಕಸೂತಿ ತರಬೇತಿ ಅವಕಾಶ ಕಳೆದುಕೊಳ್ಳುವರೆಂದು ತಂದೆ ತಾಯಿಯರು ನಂಬುತ್ತಾರೆ. ಹುಡುಗಿಯರನ್ನು ಪುರುಷ

ಅಧ್ಯಾಪಕರಿಲ್ಲದ ಅಥವಾ ಹುಡುಗರ ಸಹ ಶಿಕ್ಷಣವಿಲ್ಲದ ಶಾಲೆಗಳಿಗೆ ಕಳಿಸಲಾಗುವದು ಈ ಕಾಳಜಿಗಳು ಹುಡುಗಿಯರು ಋತುಮತಿಯರಾಗುವ ಸಂದರ್ಭಗಳಲ್ಲಿ ಹಿಂದಿಗಿಂತ ಹೆಚ್ಚಾಗಿರುವು ಅನೇಕ ಸಂಪ್ರದಾಯಿಕ ಕುಟುಂಬದಲ್ಲಿ ಸಾಕ್ಷರತೆ ಮೀರಿ ಮಹಿಳೆ ಶಿಕ್ಷಣ ಪಡೆದರೆ ಅದರಿಂದ ಆಕೆಯ ವಿವಾಹ ಸಂಭವ್ಯತೆಗಳಿಗೆ ಅಪಾಯವಿದೆ.ಏಕೆಂದರೆ ಹೆಚ್ಚಿನ ಶಿಕ್ಷಣ ಮಹಿಳೆಯರನ್ನು ಅವಳಿಗೆ ತಕ್ಕ ವರ ಹುಡುಕುವುದು ಬಹಳ ಕಠಿಣವಾಗಿದೆ. ಏಕೆಂದರೆ ಮುಸ್ಲಿಂ ಸಮುದಾಯದಲ್ಲಿ ಪುರುಷರ ಕಡಿಮೆ ಶಿಕ್ಷಣ ಪಡೆಯುವಂತಹ ಸಂದರ್ಭದಲ್ಲಿ ಇನ್ನು ಹೆಣ್ಣುಮಕ್ಕಳಿಗೆ ಹೆಚ್ಚಿನ ಶಿಕ್ಷಣವನ್ನು ಏಕೆ ಕೊಡಬೇಕು ಎನ್ನುವ ನಂಬಿಕೆಯು ಇದೆ. (ಡಾ. ಎ.ಶಶಿಕಲಾ, ರಾಧಾಮಣಿ.ಡಿ, ಡಾ.ಸುನಿತಾ ಸಿ.ಎನ್,೨೦೦೩, ಪು.ಸಂ.೧೮೬-೧೮೭).

ಕೋಮುಗಲಬೆಗಳು ಸಹ ಅತಿಯಾಗಿ ಹೋಗುವುದರಿಂದ ಅದು ಮಹಿಳೆಯರಮೇಲೆ ಕೆಟ್ಟ ಪರಿಣಾಮ ಬೀರುತ್ತದೆ.ಕೋಮುಗಲಬೆಗಳು ಪುರುಷರಿಂದ ಆಗುವದು ಆದರೆ ಅದು ಮಹಿಳೆಯರ, ಸಾಮಾಜಿಕ, ಶೈಕ್ಷಣಿಕ, ರಾಜಕೀಯ, ಆರ್ಥಿಕ ಜೀವನದ ಮೇಲೆ ಪರಿಣಾಮ ಬೀರುತ್ತದೆ. ಹೀಗಾಗಿ ಮಹಿಳೆಯು ಶಿಕ್ಷಣದಿಂದ ವಂಚಿತಳಾಗುತ್ತಾಳೆ ಅಥವಾ ಶಾಲೆ ಬಿಡುವಂತಹ ಸಂದರ್ಭ ಬರುತ್ತದೆ. (ಮಹಮ್ಮದ್ ಕುಳಾಯಿ, ಶರ್ಫುದ್ದೀನ್ ಬಿ.ಎನ್., ಅಕ್ಬರ್ ಅಲಿ, ೨೦೦೦, ಪು.ಸಂ. ೨೯-೩೦).

ಸ್ತ್ರೀಯ ಬೆಳವಣಿಗೆಯಲ್ಲಿ ಅವಳ ವ್ಯಕ್ತಿತ್ವದ ವಿಕಾಸದಲ್ಲಿ ಶಿಕ್ಷಣದ ಪಾತ್ರ ಬಹಳ ಮುಖ್ಯವಾಗಿದೆ. ಮತ್ತು ಅವಳ ವ್ಯಕ್ತಿತ್ವ ಸಂಪೂರ್ಣವಾಗಿ ವಿಕಾಸವಾಗಲು ಸಮಾನವಾದ ಅವಕಾಶಗಳು ಪ್ರೋತ್ಸಾಹಿಸಬೇಕು. ಇಂತಹ ಕಾರ್ಯ ಶಿಕ್ಷಣವು ಮಾಡುತ್ತದೆ. ಶಿಕ್ಷಣಾಧಿಕಾರಿಗಳನ್ನು ತಯಾರುಮಾಡಿ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹ ನೀಡಿ ಅವರನ್ನು ಶಾಲಾಭ್ಯಾಸಕ್ಕೆ ಹುರಿದುಂಬಿಸಬೇಕು. ಹೀಗೆ ಮಾಡುವದರಿಂದ ಲಿಂಗಾಧಾರಿತ ಬೇಧ ತೊಡೆದು ಹಾಕಲು ಸಾಧ್ಯವಾಗುತ್ತದೆ. ಹೆಣ್ಣು ಮಕ್ಕಳ ಶಿಕ್ಷಣದಲ್ಲಿರುವ ಅಡ್ಡಿ ಆತಂಕಗಳನ್ನು ನಿವಾರಿಸುತ್ತಾಹೆಣ್ಣು ಮಕ್ಕಳ ಶಿಕ್ಷಣವನ್ನು ಪ್ರೋತ್ಸಾಹಿಸಬೇಕು. ಎಷ್ಟೋ ಸನ್ನಿವೇಶಗಳನ್ನು ತಾಳ್ಮೆಯಿಂದ ಮೌನವಾಗಿ, ಅವಿರೋಧವಾಗಿ ಸಹಿಸುತ್ತಾ ಬಂದಿರುವ ಮಹಿಳೆ ತನ್ನ ದೌರ್ಜನ್ಯಗಳ ವಿರುದ್ಧ ಪ್ರಭಲವಾಗಿ ಹೋರಾಡಲು ಸಾಧ್ಯವಾಗುತ್ತದೆ. ಹೆಣ್ಣು ಮಕ್ಕಳ ಶಿಕ್ಷಣ ಕಾರ್ಯಕ್ರಮದಲ್ಲಿ ಹೆಚ್ಚಿನ ಕಾಳಜಿ ವಹಿಸಬೇಕಾಗುವುದು. ಅವಳಲ್ಲಿ ನಿರ್ಧಾರಗಳನ್ನು

ಕೈಗೊಳ್ಳುವ ಕಲೆಯನ್ನು , ಕೌಶಲ್ಯವನ್ನು ಬಳಸಬೇಕು. (ಡಾ. ಎ.ಶಶಿಕಲಾ, ರಾಧಾಮಣಿ.ಡಿ, ಡಾ.ಸುನಿತಾ ಸಿ.ಎನ್,೨೦೦೩, ಪು.ಸಂ.೧೯೨).

ಅನಕ್ಷರಸ್ಥ ಮಹಿಳೆಯರಿಗೆ ಶಿಕ್ಷಣ ನೀಡುತ್ತಾ ಅವರಲ್ಲಿ ಗಂಡು ಮಕ್ಕಳ ಬಗ್ಗೆ ಮೇಲಿರಿಮೆ ಹೆಣ್ಣು ಮಕ್ಕಳ ಬಗ್ಗೆ ಇರುವ ಕೀಳಿರಿಮೆಯನ್ನು ನಿವಾರಿಸಬೇಕು ಅಂದಾಗ ಲಿಂಗ ಸಮಾನತೆಯನ್ನು ತರಲು ಸಾಧ್ಯವಾಗುತ್ತದೆ. (ಡಾ. ಎ.ಶಶಿಕಲಾ, ರಾಧಾಮಣಿ.ಡಿ, ಡಾ.ಸುನಿತಾ ಸಿ.ಎನ್,೨೦೦೩, ಪು.ಸಂ.೧೯೬).

ಅಶಿಕ್ಷಿತರು ಅಶಿಕ್ಷಿತರನ್ನೇ ಜನ್ಮ ನೀಡುವರು ಆದ್ದರಿಂದ ಮುಂದಿನ ಜನಾಂಗವನ್ನು ಸುರಕ್ಷಿತರನ್ನಾಗಿ ಮಾಡಲು ಇಂದಿನ ಜನಾಂಗದಲ್ಲಿ ಜಾಗೃತಿಯುಂಟುಮಾಡಬೇಕಾದ ಅಗತ್ಯವಿದೆ. ಹೆಣ್ಣು ಸಮಾಜದ ಅರ್ಧಭಾಗ ಮಾತ್ರವಲ್ಲ ಮುಂದಿನ ಪೀಳಿಗೆಯ ತಾಯಿಯೂ ಹೌದು ಅಶಿಕ್ಷಿತ ತಾಯಿಯು ಅಶಿಕ್ಷಿತರ ತಾಯಿಯಾಗಬಲ್ಲಳು ತನ್ನ ಅರ್ಧಭಾಗವನ್ನು ತನ್ನ ಮಾತೆಯನ್ನು ಅಜ್ಞಾನದ ಕತ್ತಲಲ್ಲಿ ಕಟ್ಟಿಡುವ ಈ ಸಮಾಜ ಬೆಳಕನ್ನು ಪಡೆಯಲಾರದು ಆ ಬೆಳಕೆಂದರೆ ಶಿಕ್ಷಣವೇ ಆಗಿದೆ. ಹೀಗ ಾಗಿ ಶಿಕ್ಷಣವು ಮಹಿಳೆಗೆ ಪುರುಷನಿಗೆ ಸರಿಸಮಾನವಾಗಿ ನೀಡಬೇಕು ಅಂದಾಗ ಲಿಂಗಾಧಾರಿತ ತಾರತಮ್ಯ ನಿವಾರಣೆ ಮಾಡಬಹುದು. ಕೇವಲ ಶಿಕ್ಷಣ ಒಂದೇ ಅಲ್ಲದೆ ಅದರ ಜೊತೆಗೆ ಕುಟುಂಬದಲ್ಲಿನ ತಾರತಮ್ಯ ನಿವಾರಣೆ ಮಾಡಬೇಕು. ಮುಸ್ಲಿಂ ಮಹಿಳೆಯರಿಗೆ ಅನೌಪಚಾರಿಕ ಶಿಕ್ಷಣವನ್ನು ಪಡೆಯುವದಕ್ಕೆ ಹೆಚ್ಚು ಒತ್ತು ನೀಡುವರು. ಇದರ ಜೊತೆಗೆ ಔಪಚಾರಿಕ ಶಿಕ್ಷಣ ಪಡೆಯಲು ಒತ್ತು ಕೊಡಬೇಕು. ಅದೇರೀತಿ ಶಾಲೆ ಬಿಡುವಂತಹ ಮಕ್ಕಳನ್ನು ಶಾಲೆಗೆ ಬರುವಂತೆ ಪ್ರೋತ್ಸಾಹ ಕೊಡಬೇಕು. (ಮಹಮ್ಮದ್ ಕುಳಾಯಿ, ಶರ್ಫುದ್ದೀನ್ ಬಿ.ಎನ್., ಅಕ್ಬರ್ ಅಲಿ, ೨೦೦೦, ಪು.ಸಂ. ೬೯).

ಇಂದಿನ ದಿನದಲ್ಲೂ ಯಾರಿಗೆ ಶಿಕ್ಷಣದ ಅಗತ್ಯವಿದೆ ಎಂದು ಕೇಳಿದರೆ ಗಂಡು ಮಕ್ಕಳಿಗೆ ಎಂದು ಹೇಳುವದು ಕೇಳಿಬರುತ್ತದೆ. ಹೆಣ್ಣು ಮಕ್ಕಳಿಗೆ ಶಿಕ್ಷಣ ಯಾಕೆ ಬೇಕು ಎಂದು ಕೇಳಿದರೆ ಒಳ್ಳೆಯ ಹುಡುಗ ಸಿಗಬೇಕಾದರೆ ಹುಡುಗಿಯು ಎಷ್ಟು ಓದಿದ್ದಾಳೆ ಎಂದು ಕೇಳುತ್ತಾರೆ ಎಂದು ಅನೇಕರು ಮಾತನಾಡುವರು. ನಂತರ ಲೋಕಜ್ಞಾನ ಪಡೆಯಲು ತಮ್ಮ ಕಾಲ ಮೇಲೆನಿಲ್ಲಲು ಎಂದು ಹೇಳುತ್ತಾರೆ. ಇದರಿಂದ ಶಿಕ್ಷಣ ನೀಡುವದು ಅವಳ ವ್ಯಕ್ತಿತ್ವ ರೂಪಿಸಿಕೊಳ್ಳಲು ಅಲ್ಲ ಎಂಬುದು ಸ್ಪಷ್ಟವಾಗುತ್ತದೆ.

ಈ ತಾರತಮ್ಯ ಹೋಗಲಾಡಿಸುವ ನಿಟ್ಟಿನಲ್ಲಿ ಬಹಳಷ್ಟು ಕೆಲಸ ಕಾರ್ಯಗಳು ನಡೆಯುತ್ತಿವೆ ಶಾಲೆಯಲ್ಲಿ ಹೆಣ್ಣುಮಕ್ಕಳು ಸಮಾನ ಭಾಗವಹಿಸುವಿಕೆಗಾಗಿ ಕೆಲವೊಂದು ಅವಕಾಶಗಳನ್ನು ಹೆಣ್ಣುಮಕ್ಕಳಿಗೆ ಕೊಡಲಾಗಿದೆ. ಸಭೆ ಸಮಾರಂಭದ ಮುಂದೆ ನಿಲ್ಲುವ ಅವಕಾಶ ಶಾಲೆಯ ಪ್ರತಿಯೊಂದು ಚಟುವಟಿಕೆಯಲ್ಲಿ ಸಮಾನವಾದ ಅವಕಾಶ ನೀಡುವದು ಶಾಲೆಗಳಲ್ಲಿ ಹೆಣ್ಣುಮಕ್ಕಳಲ್ಲಿ ಧೈರ್ಯ ಸಾಹಸಕ್ಕೆ ಅವಕಾಶ ಕೊಡುವದರ ಜೊತೆಗೆ ಗಂಡು ಮಕ್ಕಳು ಕೂಡ ಈ ನಿಟ್ಟಿನಲ್ಲಿ ಸಂವೇದಿಗಳಾಗುವಂತೆ ಗಮನ ಕೊಡಲೇಬೇಕಾಗುತ್ತದೆ. (ಗಾಯಿತ್ರಿ .ಎನ್, ೨೦೦೨ ನವೆಂಬರ್ ೧೧, ಪು. ಸಂ. ೯-೧೦).

ಅನ್ಯಾಯವನ್ನು ಸಹಿಸಿ ಕೊಳ್ಳಬೇಕಾಗಿಲ್ಲ ಎಂಬುದನ್ನು ಹೆಣ್ಣುಮಕ್ಕಳು ಶಾಲಾದಿನಗಳಲ್ಲೆ ಅರ್ಥಮಾಡಿಕೊಂಡರೆ ಗಂಡನ ಮನೆಯಲ್ಲಿ ಕೆಲಸ ಕ್ಷೇತ್ರಗಳಲ್ಲಿ ನಡೆಯುವ ಎಷ್ಟೋ ದೌರ್ಜನ್ಯಗಳನ್ನು ಎದುರಿಸಬಹುದು ಗಂಡು ಮತ್ತು ಹೆಣ್ಣು ಮಕ್ಕಳಿಬ್ಬರಲ್ಲೂ ಲಿಂಗ ಸಂವೇಧಿತ ಮನೋಭಾವ ಬೆಳೆಯಬೇಕಾಗುತ್ತದೆ ಪರಸ್ಪರ ಮಾನ್ಯತೆ ಗೌರವ ಕೊಡುವ ಧೋರಣೆ ಸಂಬಂಧ ಬೆಳೆಸುವಂತಹ ವಾತಾವರಣ ಶಿಕ್ಷಣದಿಂದ ಸಿಗಬೇಕಾಗಿದೆ ಅಂದಾಗ ಮಾತ್ರ ಲಿಂಗ ತಾರತಮ್ಯವನ್ನು ನಿವಾರಣೆ ಮಾಡಿ ಲಿಂಗ ಸಮಾನತೆಯನ್ನು ತರಬಹುದು. (ಗಾಯಿತ್ರಿ .ಎನ್, ೨೦೦೨ ನವೆಂಬರ್ ೧೧, ಪು. ಸಂ. ೯-೧೦).

**ಉಲ್ಲೇಖಗಳು**


೧. ಅಬ್ದುಲ್ ಗಫುರ, ೧೯೯೬, ಪವಿತ್ರ ಕುರಾನ್, ಮಂಗಳೂರು, ಶಾಂತಿ ಪ್ರಕಾಶನ.

೨. ಇಬ್ರಾಹಿಂ ಸಈದ್, ಮುಸುಕಿನಲ್ಲಿ ಮುಸ್ಲಿಂ ಮಹಿಳೆ, ೧೯೯೭, ಮಂಗಳೂರು, ಶಾಂತಿ ಪ್ರಕಾಶನ.

೩. ಓಬಳೇಶ್ ಘಟ್ಟ, ೧೯೯೨, ಭಾರತೀಯ ಶಿಕ್ಷಣ ಮತ್ತು ಪ್ರಚಲಿತ ಸಮಸ್ಯೆ, ತೋರಣ ಘಟ್ಟ, ಶಿವಗಂಗಾ ಪ್ರಕಾಶನ.

೪. ಗಾಯತ್ರಿ .ಎನ್ (ಸಂ), ೨೦೦೩, ಅಚಲ, ಬೆಂಗಳೂರು, ರಾಮಕೃಷ್ಣ ಪ್ರಕಶಿತರು.

೫. ಮುಹಮ್ಮದ್ ಕುಳಾಯಿ, ಶರ್ಫುದ್ದಿನ್ ಬಿ.ಎನ್., ಅಕ್ಬರ್ ಅಲಿ, ೨೦೦೦,ಶಿಕ್ಷಣ ಮತ್ತು ಮುಸ್ಲಿಮರು, ಮಂಗಳೂರು ಮುಸ್ಲಿಂ ಲೇಖಕರ ಸಂಘ.

೬. ಡಾ. ಶಶಿಕಲಾ .ಎ., ರಾಧಾಮಣಿ.ಡಿ, ಡಾ.ಸುನಿತಾ ಸಿ.ಎನ್,೨೦೦೩, ಅನು: ಡಾ. ಲೆಡಿಯಾ ಫರ್ನಾಂಡಿಸ್, ಡಾ.ಆನಂದೀ ಮಾರ್ಟಿಸ್, ಡಾ.ಶಶಿಕಲಾ .ಎನ್, ಮೈಸೂರು, ವಿಜಯ ಲಕ್ಷ್ಮಿ ಪ್ರಕಾಶನ.

೭. ಶಂಕರ್ ರಾವ್ ಚ.ನ., ೧೯೯೭, ಭಾರತೀಯ ಸಮಾಜಶಾಸ್ತ್ರ, ಬೆಂಗಳೂರು, ಕೆಂಬ್ರಿಡ್ಜ್ ಪಬ್ಲಿಷಿಂಗ್ ಕಂಪನಿ.

೬

## ಶಾಲಾ ಬಿಡುವಿಕೆಗೆ ಸಂಬಂಧಿಸಿದ ಪ್ರಕರಣಗಳ ಪರಿಶೀಲನೆ

ನನ್ನ ಅಧ್ಯಯನಕ್ಕೆ ಒಟ್ಟು ಹತ್ತು ಶಾಲೆಗಳನ್ನು ಆಯ್ಕೆ ಮಾಡಿಕೊಂಡಿದ್ದು ಅದರಲ್ಲಿ ಕೆಲವು ಮುಸ್ಲಿಂ ಸಮುದಾಯದಲ್ಲಿ ಬರುವಂತಹ ಮಕ್ಕಳನ್ನು ಕುರಿತು ಸಂದರ್ಶನ ಮಾಡಿದ್ದೇನೆ. ಆ ಶಾಲೆ ಮತ್ತು ಮಧ್ಯದಲ್ಲೆ ಶಾಲೆ ಬಿಟ್ಟಂತ ಮಕ್ಕಳ ವಿವರ, ಅವರು ಶಾಲೆ ಬಿಡಲು ಕಾರಣಗಳೇನು, ಸರ್ಕಾರ ಇಷ್ಟೆಲ್ಲ ಯೋಜನೆಗಳು ಅನುಷ್ಠಾನ ಗೊಳಿಸಿದರೂ ಏಕೆ ಹೆಣ್ಣು ಮಕ್ಕಳು ಶಾಲೆ ಬಿಡುತ್ತಾರೆ ಎಂಬುದು ಪ್ರಕರಣಗಳ ಅಧ್ಯಯನದಿಂದ ತಿಳಿದು ಬರುತ್ತದೆ ಅಂತಹ ಪ್ರಕರಣಗಳನ್ನು ಈ ರೀತಿ ದಾಖಲಿಸಿದ್ದೇನೆ.

ನನ್ನ ಅಧ್ಯಯನಕ್ಕೆ ಕೇವಲ ಶಾಲೆಯಿಂದ ಮಾಹಿತಿ ಪಡೆಯಲು ಪರಿಪೂರ್ಣವಾಗುವುದಿಲ್ಲ ಎಂದು ತಿಳಿದು ಇತರ ೩೦ ವರ್ಷದ ಒಳಗಿನ ಮಹಿಳೆಯರನ್ನು ಆಯ್ಕೆಮಾಡಿಕೊಂಡು ಸಂದರ್ಶನ ಮಾಡಿದ್ದೇನೆ.

ಅವರ ಹೆಸರು , ಹುಟ್ಟಿದ್ದು, ಎಷ್ಟು ಶಿಕ್ಷಣ ಪಡೆದಿದ್ದಾರೆ, ಶಾಲೆ ಬಿಡಲು ಕಾರಣಗಳೇನು ಕೆಲವೊಬ್ಬರು ಕೇವಲ ಮದರಸಾದಲ್ಲಿ ಮಾತ್ರ ಶಿಕ್ಷಣ ಪಡೆದಿದ್ದರು ಅಂತಹವರ ಬಗ್ಗೆ ಈ ಮುಂದೆ ವಿವರವಾಗಿ ವಿಶ್ಲೇಷಿಸಿದ್ದೇನೆ.

ಕ್ಷೇತ್ರ ಅಧ್ಯಯನ ಮಾಡುವುದರ ಮೂಲಕ ಪ್ರಕರಣಗಳ ಅಧ್ಯಯನ ಅನುಭವವನ್ನು ಈ ಮುಂದಿನಂತೆ ವಿವರಿಸಿದ್ದೇನೆ.

### ಹಿರಿಯ ಪ್ರಾಥಮಿಕ ಶಾಲೆ (ಮರಳಿ)

ಈ ಶಾಲೆ ೧೯೫೦ ರಿಂದ ಕಾರ್ಯನಿರ್ವಾಹಣೆ ಮಾಡುತ್ತಿದ್ದು, ಇಲ್ಲಿ ಒಟ್ಟು ಶಿಕ್ಷಕರ ಸಂಖ್ಯೆ ೮ ಜನರಿದ್ದಾರೆ, ಅದರಲ್ಲಿ ಮಹಿಳೆಯರು ೫ ಜನ ಪುರುಷರು ೩ ಜನರಿದ್ದಾರೆ.

ಈ ಶಾಲೆಯಲ್ಲಿ ಬಿಸಿಯೂಟ ಯೋಜನೆ, ಗ್ರಂಥಾಲಯ, ಪ್ರಯೋಗಾಲಯ, ಶೌಚಾಲಯ, ಸೌಲಭ್ಯ ಚೆನ್ನಾಗಿದೆ. ಆಟದ ಮೈದಾನ, ಕಂಪೌಡಿನ ಸೌಲಭ್ಯವು ಉತ್ತಮ ರೀತಿಯಲ್ಲಿದೆ.

ಈ ಶಾಲೆಯಲ್ಲಿ ಒಟ್ಟು ೨೬೮ ಜನ ಮಕ್ಕಳು ದಾಖಲಾಗಿದ್ದು, ಅದರಲ್ಲಿ ಗಂಡು ಮಕ್ಕಳಸಂಖ್ಯೆ ೧೩೫ ಹೆಣ್ಣುಮಕ್ಕಳಸಂಖ್ಯೆ ೧೩೩ ಜನರಿದ್ದಾರೆ . ಶಾಲೆಬಿಟ್ಟವರಲ್ಲಿ ೮ ಜನರಿದ್ದು ಅದರಲ್ಲಿ ಮುಸ್ಲೀಂ ಸಮುದಾಯದ ಮಕ್ಕಳು ಇಬ್ಬರಿದ್ದಾರೆ. ನನ್ನ ಅಧ್ಯಯನಕ್ಕೆ ಕೇವಲ ಮುಸ್ಲೀಂ ಸಮುದಾಯ ಮಾತ್ರ

ಆಯ್ಕೆ ಮಾಡಿಕೊಂಡಿರುವುದರಿಂದ ಮುಸ್ಲೀಂ ಮಕ್ಕಳಿಗೆ ಮಾತ್ರ ಸಂದರ್ಶನ ಮಾಡಿದ ಮಾಹಿತಿಯನ್ನು ಸಂಗ್ರಹಿಸಿದ್ದೇನೆ.

**ಖಾಜಾ ಹುಸೇನ ತಂದೆ ರಾಜಾಸಾಬ**

ಖಾಜಾ ಹುಸೇನನು ಹದಿಮೂರು ವರ್ಷದ ಹುಡುಗ ಇವನು ೬ನೇ ತರಗತಿಯಲ್ಲಿಯೇ ಶಾಲೆಬಿಟ್ಟನು. ಇವನ ಮನೆಯಸ್ಥಿತಿಯು ಚೆನ್ನಾಗಿಯೆ ಇತ್ತು. ಹೀಗಾಗಿ ಖಾಜಾಹುಸೇನನಿಗೆ ಖಾಸಗಿ ಶಾಲೆಗೆ ಸೇರಿಸಿದ್ದರು. ಆದರೆ ಕಾಲಾನಂತರ ಖಾಜಾಹುಸೇನನ ಮನೆಯ ಸ್ಥಿತಿಯು ಗಂಭೀರ ಸ್ಥಿತಿಗೆ ಇಳಿಯಿತು. ಹೀಗಾಗಿ ಖಾಸಗಿ ಶಾಲೆ ಬಿಡಿಸಿ ಸರ್ಕಾರಿ ಶಾಲೆಗೆ ಸೇರಿಸಬೇಕೆಂದು ರಾಜಾಸಾಬನು ನಿರ್ಧರಿಸಿದನು. ಶಾಲೆಯವರಿಗೆ ಫೀಸ್ ತುಂಬ ಬೇಕಾದುದರಿಂದ ಅವರು ಟಿ.ಸಿ. ಕೊಡಲು ನಿರ್ಧರಿಸಿದರು ಹೀಗಾಗಿ ಆ ಹುಡುಗನು ಓದಿನಲ್ಲಿ ನಿರಾಸಕ್ತಿ ತಳೆದು ಶಾಲೆಗೆ ಹೋಗುವುದನ್ನು ನಿರಾಕರಿಸಿದನು.

ಮಕ್ಕಳು ಓದಬೇಕೆನ್ನುವ ಆಸಕ್ತಿ ಇದ್ದರೆ ಹೇಗಾದರು ಮಾಡಿ ಶಾಲೆಗೆ ಸೇರಿಸುತ್ತಿದ್ದರು. ಆದರೆ ಖಾಜಾಹುಸೇನನ ತಂದೆ ತಾಯಿಯು ಅನಕ್ಷರಸ್ಥರಿದ್ದ ಕಾರಣ ತಾವೇ ಸರಿಯಾದ ಶಿಕ್ಷಣ ಪಡೆಯದವರು ಇನ್ನು ಆ ಮಗುವಿಗೆ ಶಿಕ್ಷಣ ಕೊಡಿಸುವುದು ತುಂಬಾ ದೂರದಮಾತು.

**ರಾಜಾಸಾಬ ತಂದೆ ಯಮನೂರಸಾಬ**

ರಾಜಾಸಾಬನು ಹನ್ನೊಂದು ವರ್ಷದ ಬಾಲಕ ಇವನ ತಂದೆ ಯಮನೂರಸಾಬ. ಇವನು ಶಾಲೆ ಬಿಟ್ಟಿದ್ದು ೫ನೇ ತರಗತಿಯಲ್ಲಿಯೇ ಇವರ ಕೌಟುಂಬಿಕ ಸ್ಥಿತಿಯು ಮಧ್ಯಮ ರೀತಿಯಲ್ಲಿದೆ. ಯಮನೂರಸಾಬ ದಿನಾಲು ಹೊಲಕ್ಕೆ ಹೋಗುತ್ತಿದ್ದ. ತಾನು ಹೋಗುವಾಗ ರಾಜಾಸಾಬನಿಗೂ ಆಗಾಗ ಕರೆದುಕೊಂಡು ಹೋಗುತ್ತಿದ್ದನು . ಹೀಗಾಗಿ ಆ ಹುಡುಗನು ಶಾಲೆಗೆ ಒಂದು ದಿನ ಹೋಗುವದು ಒಂದು ದಿನ ಬಿಡುತ್ತಿದ್ದನು. ಹೀಗಾಗಿ ಓದಿನಲ್ಲಿ ಆಸಕ್ತಿ ಇಲ್ಲದೆ ಶಾಲೆಗೆ ಹೋಗುವದನ್ನು ಬಿಟ್ಟನು.

ತಂದೆಯಾದವನು ಮಗನಿಗೆ ಬುದ್ಧಿ ಹೇಳಿ ಶಾಲೆಗೆ ಕಳುಹಿಸಬೇಕಾಗಿತ್ತು. ಆದರೆ ಅವರಿಗೆ ಓದಿನಲ್ಲಿ ಏನೂ ಗೊತ್ತಿಲ್ಲ. ಓದಿನ ಮಹತ್ವ ತಿಳಿಯದ ಯಮನೂರ ಮಗನಿಗೆ ಬುದ್ಧಿ ಮಾತು ಹೇಳುವುದು ಆಗದ ಮಾತು.

**ಮುಜಾವರ ಕ್ಯಾಂಪ್ (ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ ೧೯೯೩)**

ಈ ಶಾಲೆಯು ಮುಜಾವರ ಕ್ಯಾಂಪ್‌ನಲ್ಲಿ ೧೯೯೩ರಿಂದ ಕಾರ್ಯ ನಿರ್ವಹಣೆ ಮಾಡುತ್ತಿದೆ. ಈ ಶಾಲೆಯು ಊರಲ್ಲಿ ಇದ್ದು ಎಲ್ಲಾ ಮಕ್ಕಳಿಗೆ ಶಾಲೆಗೆ ಬರಲು ಅನುಕೂಲಕರ ವಾತಾವರಣವಿದೆ. ಈ ಶಾಲೆಯಲ್ಲಿ ಒಟ್ಟು ೪ ಜನ ಶಿಕ್ಷಕರಿದ್ದು ಮಹಿಳೆಯರು ೩ ಜನ ಪುರುಷರು ಒಬ್ಬರಿದ್ದಾರೆ. ಈ ಶಾಲೆಯಲ್ಲಿ ಬಿಸಿಯೂಟ ಯೋಜನೆ, ಶೌಚಾಲಯ, ಕುಡಿಯುವ ನೀರಿನ ವ್ಯವಸ್ಥೆ, ಕೌಂಪೌಂಡಿನ ವ್ಯವಸ್ಥೆಯು ಇದೆ.

**ರಾಜಹುಸೇನ , ಬಾನುಬೇಗಂ**

ಖಾನ್‌ಸಾಬನಿಗೆ ಇಬ್ಬರು ಹೆಂಡಿರು ಇಬ್ಬರು ಹೆಂಡತಿಯರಲ್ಲಿ ಎರಡನೆಯ ಹೆಂಡತಿಯ ಮಕ್ಕಳು ರಾಜಹುಸೇನ ಮತ್ತು ಬಾನುಬೇಗಂ ಇವರಿಬ್ಬರು ಸೋದರ ಸೋದರಿಯರು ಆರಂಭದಲ್ಲಿ ಇಬ್ಬರು ಹೆಂಡತಿಯರನ್ನು ಖಾನಸಾಬ ಚೆನ್ನಾಗಿಯೇ ನೋಡಿಕೊಳ್ಳುತ್ತಿದ್ದ ಆದರೆ ನಂತರ ಗಂಡ ಹೆಂಡತಿಯರ ಮಧ್ಯ ಬಿನ್ನಾಭಿಪ್ರಾಯ ಉಂಟಾಗಿ ಎರಡನೇ ಹೆಂಡತಿ ಮತ್ತು ಮಕ್ಕಳಿಗೆ ಬಿಟ್ಟು ಮೊದಲನೆಯ ಹೆಂಡತಿಯ ಹತ್ತಿರ ಹೋದ, ಅವನು ಹೋದ ನಂತರ ಅವರ ಮನೆಯ ಸ್ಥಿತಿ ಅಧೋಗತಿಗೆ ಇಳಿಯಿತು. ಹೀಗಾಗಿ ಮನೆಯ ನಿರ್ವಾಹಣೆ ಸಲುವಾಗಿ ಇವರ ತಾಯಿಯೇ ಒಂದು ಹೋಟೆಲಿನಲ್ಲಿ ಪಾತ್ರೆ ತೊಳೆಯಲು ಹೋಗುತ್ತಿದ್ದಳು ಹೀಗಾಗಿ ಆಮಕ್ಕಳ ಮೇಲೆ ಯಾರ ಜವಾಬ್ದರಿ ಇಲ್ಲವಾಯಿತು.

ತಂದೆ ಹಾಗೂ ತಾಯಿ ಇಬ್ಬರ ಅಲಕ್ಷತೆಯಿಂದ ಮಕ್ಕಳು ಶಾಲೆಗೆ ಒಂದು ದಿನ ಹೋಗಿ ಒಂದು ದಿನ ಬಿಡಲು ಪ್ರಾರಂಭಿಸಿದರು . ಬೆಳಿಗ್ಗೆ ಮಧ್ಯಾಹ್ನ ಶಾಲೆ ಬಿಡುತ್ತಿದ್ದರು. ರಾಜಹುಸೇನ ಮೂರನೆಯ ತರಗತಿಯಲ್ಲಿಯೇ ಶಾಲೆ ಬಿಟ್ಟು ಗ್ಯಾರೇಜ್‌ಗೆ ಹೋಗಲು ಪ್ರಾರಂಭಿಸಿದ ಅದೇರೀತಿ ಖಾತುನಬಿಯು ಮೂರನೇಯ ಮಗಳು ಸಹ ೫ನೇ ತರಗತಿಯವರೆಗೆ ಶಾಲೆಗೆ ಹೋಗಿ ನಂತರ ಶಾಲೆ ಬಿಟ್ಟಳು. ಮನೆಯಲ್ಲಿ ಕೆಲಸ ಮಾಡಿ, ಮನೆ ನೋಡಿಕೊಂಡು ಹೋಗಲು ಹಣದ ತೊಂದರೆ ಇದ್ದ ಕಾರಣ ಇವಳು ಶಾಲೆ ಬಿಟ್ಟಳು.

ಮುಸ್ಲಿಮ್ ಸಮುದಾಯದಲ್ಲಿ ಬಹು ಪತ್ನಿತ್ವ ವಿವಾಹ ಪದ್ದತಿ ಆಚರಣೆಯಲ್ಲಿದ್ದು ಪುರುಷ ಮಾತ್ರ ಇಬ್ಬರಿಗಿಂತ ಹೆಚ್ಚು ಮಹಿಳೆಯರನ್ನು ವಿವಾಹ ವಾಗಬಹುದಿತ್ತು. ಆದರೆ ಮಹಿಳೆ ಮಾತ್ರ ಕೇವಲ

ಒಬ್ಬ ಪುರುಷನಿಗೆ ಮಾತ್ರ ಮದುವೆ ಯಾಗಬಹುದಿತ್ತು. ಇಂತ ಅನಿಷ್ಠ ಪದ್ಧತಿಯನ್ನು ಮಹಿಳೆಯರ ಮೇಲೆ ಯಾವರೀತಿ ಮಾನಸಿಕವಾಗಿ ಪರಿಣಾಮಬೀರುತ್ತದ್ದೆ. ಮಕ್ಕಳಿಗೆ ಪಾಲನೆ ಸರಿಯಾಗಿ ಶಿಕ್ಷಣ ಸಹ ನೀಡಲು ಆಗುತಿಲ್ಲ. ಇಂತ ಸ್ಥಿತಿಯು ಖಾತುನ್‌ಬಿಯ ಸ್ಥಿತಿ ಆಗಿತ್ತು.

**ಫಾತಿಮಾ ತಂದೆ ಕರಿಂಸಾಬ**

ಫಾತಿಮನ ತಂದೆ ಕರೀಂಸಾಬ ಇವನಿಗೆ ಐದು ಜನ ಮಕ್ಕಳು, ಐದು ಜನರಲ್ಲಿ ಫಾತಿಮಾಳು ಒಬ್ಬಳಾಗಿದ್ದಾಳೆ. ಗಂಡನಿಂದ ದೂರವಾದ ಫಾತಿಮಳು ಮಕ್ಕಳ ಜೊತೆ ಮನೆಯ ಎಲ್ಲಾ ಜಾವಾಬ್ದಾರಿಯನ್ನು ನೋಡಿಕೊಳ್ಳ ಬೇಕಾಯಿತು ಇಬ್ಬರು ಹಿರಿಯ ಮಕ್ಕಳು ಸಹ ಕೆಲಸಕ್ಕೆ ಹೋಗುತ್ತಿದ್ದರು. ಅದೇ ರೀತಿ ಫಾತಿಮಳ ತಾಯಿಯು ಕಾಯಿಪಲ್ಲೆ ಮಾರಲು ಹೋಗುತಿದ್ದಳು. ಹೀಗಾಗಿ ಮನೆಯ ಕೆಲಸ ಮತ್ತು ಅಡಿಗೆ ಮಾಡಲು ಇನ್ನುಳಿದ ಕಿರಿಯ ಮಕ್ಕಳನ್ನು ನೋಡಿಕೊಂಡು ಹೋಗಲು ಫಾತಿಮಳಿಗೆ ಶಾಲೆ ಬಿಡಿಸಿದರು.

ಫಾತಿಮಳು ಇನ್ನು ಹುಡುಗಿ ಆಟಪಾಠ ಕಲಿಯುವ ವಯಸ್ಸಿನಲ್ಲಿ ಮನೆಯ ಜವಬ್ದಾರಿ ಅಡಿಗೆ ಮಾಡುವ ಕೆಲಸದ ಭಾರ ಹಾಕಲಾಯಿತು. ಎಲ್ಲಾರ ನಡುವೆ ಮುಗ್ದ ಬಾಲೆಯ ಜೀವ ಹಿಂಡುವರು.

**ಹುಸೇನಬಾಷಾ ತಂದೆ ಹುಸೇನಸಾಬ್**

ಹುಸೇನ ಭಾಷಾ ೩ನೇ ತರಗತಿಯಲ್ಲಿಯೇ ಶಾಲೆ ಬಿಟ್ಟನು. ಇವನ ತಂದೆ ಹುಸೇನಸಾಬ ತಾಯಿ ನಜೀರಾ. ಹುಸೇನಭಾಷಾ ಇನ್ನೂ ಎರಡು ವರ್ಷದವನಿದ್ದಾಗಲೆ ತಂದೆ ತೀರಿಕೊಂಡನು ತಾಯಿಯು ಟಿ.ಬಿ. ಕಾಯಿಲೆಗೆ ಒಳಗಾಗಿದ್ದಳು ಒಬ್ಬನೇ ಮಗ ತಾಯಿಯನ್ನು ನೋಡಿಕೊಳ್ಳಲು ಯಾರು ಇಲ್ಲದರಿಂದ ಮನೆಯ ಕೆಲಸ ಮಾಡಲು ಈಗ ಶಾಲೆ ಬಿಟ್ಟನು. ಶಾಲೆಬಿಟ್ಟು ಕೆಲಸಕ್ಕೆ ಹೋಗುತ್ತಾನೆ.

ಒಟ್ಟಿನಲ್ಲಿ ಇವನ ಸ್ಥಿತಿ ನೋಡಿದರೆ ಹುಸೇನಭಾಷಾ ಮಾಡಿರುವದು ತಪ್ಪೇನಲ್ಲ ಏಕೆಂದರೆ ಅವನ ಮನೆಯ ಸ್ಥಿತಿಯೇ ಆ ರೀತಿ ಇತ್ತು. ಭಾರತ ದಂತಹ ಬಡ ರಾಷ್ಟ್ರದಲ್ಲಿ ಇಂತಹ ಉದಾಹರಣೆಗಳು ಸಾಮಾನ್ಯವಾದಂತಹು. ಎಲ್ಲಿಯವರೆಗೆ ಒಳ್ಳೆಯ ಶಿಕ್ಷಣ ಪಡೆದು ಕೊಳ್ಳುವದಿಲ್ಲ ಅಲ್ಲಿಯವರೆಗೆ ನಮ್ಮ ದೇಶ ಅಭಿವೃದಿ ಹೊಂದಲು ಸಾಧ್ಯವಿಲ್ಲ ಹೀಗಾಗಿ ಶಿಕ್ಷಣ ಪಡೆಯುವದು ಅನಿವಾರ್ಯವಾಗಿದೆ.

**ಗುಂಡಮ್ಮ ಕ್ಯಾಂಪ್ (ಕಿರಿಯ ಪ್ರಾಥಮಿಕ ಶಾಲೆ)**

ಈ ಶಾಲೆಯು ೧೯೬೨ ರಿಂದ ಕಾರ್ಯನಿರ್ವಹಿಸುತ್ತಿದೆ. ಈ ಶಾಲೆಯಲ್ಲಿ ಒಟ್ಟು ನಾಲ್ಕು ಜನ ಶಿಕ್ಷಕರಿದ್ದು ಅದರಲ್ಲಿ ಮೂರು ಜನ ಪುರುಷರು, ಒಬ್ಬಳು ಶಿಕ್ಷಕಿಯು ಇದ್ದಾಳೆ. ಈ ಶಾಲೆಯಲ್ಲಿ ಬಿಸಿಯೂಟ ಯೋಜನೆ, ಸಮವಸ್ತ್ರ , ಪಠ್ಯಪುಸ್ತಕ ,ಶೌಚಾಲಯದ ಸೌಲಭ್ಯವಿದೆ ಆದರೆ ಆಟದ ಮೈದಾನ ಸ್ವಲ್ಪಮಟ್ಟಿಗಿದೆ, ಕಂಪೌಂಡಿನ ವ್ಯವಸ್ಥೆಯು ಸರಿಯಾಗಿಲ್ಲ.

ಈ ಶಾಲೆಯಲ್ಲಿ ಒಟ್ಟು ಆರು ಜನ ಶಾಲೆ ಬಿಟ್ಟಿದ್ದಾರೆ, ಅದರಲ್ಲಿ ಮುಸ್ಲಿಂ ಮಕ್ಕಳು ನಾಲ್ಕು ಜನ ಇದ್ದಾರೆ.

**ಫಕ್ರುದ್ದೀನ ಸಾಬ ತಂದೆ ಖಾಸಿಂಸಾಬ**

ಫಕ್ರುದೀನ ೧೦ ವರ್ಷದ ಬಾಲಕ ಇವನ ತಂದೆ ಖಾಸಿಂಸಾಬ ಫಕ್ರುದ್ದೀನ ೪ನೇ ತರಗತಿ-ಯಲ್ಲಿಯ ಶಾಲೆ ಬಿಟ್ಟಿದ್ದಾನೆ. ಇವನ ತಂದೆ ರಿಕ್ಷಾ ನೆಡಿಸಿ ಮನೆಯ ಜೀವನ ನಡೆಸುತ್ತಿದ್ದ ತಾಯಿಯು ಸಹ ಕೂಲಿ ಕೆಲಸಕ್ಕೆ ಹೋಗುತ್ತಾಳೆ. ಖಾಸಿಂಸಾಬನಿಗೆ ಒಟ್ಟು ೬ ಜನ ಮಕ್ಕಳಲ್ಲಿ ಫಕ್ರುದ್ದಿನ ಒಬ್ಬನಾಗಿ ದ್ದಾನೆ. ಮನೆಯ ದೈನಂದಿನ ಸ್ಥಿತಿಯು ನಡೆಯುವುದಿಲ್ಲ ಎಂದು ಫಕ್ರುದ್ದಿನನಿಗೆ ಶಾಲೆ ಬಿಡಿಸಿ ಕೆಲಸಕ್ಕೆ ದೂಡಿದರು ಫಕ್ರುದ್ದೀನ ದಿನಾಲು ಚಕ್ಕುಲಿ ಮಾಡುವಂತಹ ಕೆಲಸದಲ್ಲಿ ತೊಡಗುತ್ತಿದ್ದನು ಹೀಗಾಗಿ ಓದುವದರಲ್ಲಿ ಆಸಕ್ತಿ ಕಳೆದುಕೊಂಡನು.

ಹೀಗಾಗಿ ಶಾಲೆ ಹೋಗುದನು ಈ ಮಗು ನಿರಾಕರಿಸಿತು ಚಿಕ್ಕ ವಯಸ್ಸಿನಲ್ಲಿಯೇ ಕೆಲಸಕ್ಕೆ ದೂಡುವದರಿಂದ ಆ ಮಕ್ಕಳ ಮನಸ್ಸು ಶರೀರದ ಮೇಲೆ ಗಾಢವಾದ ಪರಿಣಾಮ ಬೀರುತ್ತದೆ. ಇದನ್ನು ಅರಿಯದ ತಂದೆ ತಾಯಿಯರು ಕೇವಲ ತಮ್ಮ ಮಕ್ಕಳ ಆದಾಯವನ್ನು ಮಾತ್ರ ಆಪೇಕ್ಷಿಸುವರು ಆದರೆ ಆಮಗುವಿನ ಭವಿಷ್ಯದ ಬಗೆಯರು ಆಲೋಚಿಸುವುದಿಲ್ಲ.

**ಚಾಂದ ಪಾಷ ತಂದೆ ಖಾಸಿಂಸಾಬ**

ಚಾಂದಪಾಷ ೧೧ ವರ್ಷದ ಬಾಲಕ ಇವನ ತಂದೆ ಖಸಿಂಸಾಬ ತಾಯಿ ಹುಸೇನಬೀ ಇವರಿಗೆ ಒಟ್ಟು ೫ ಜನ ಮಕ್ಕಳಿದ್ದಾರೆ ಅದರಲ್ಲಿ ಚಾಂದಪಾಷನು ಒಬ್ಬನಾಗಿದ್ದನೆ . ಚಾಂದಪಾಷ ನ ತಂದೆ ಯವುದೆ ಉದ್ಯೋಗ ಮಾಡಲಾರದೆ, ಕುಂತು ತಿನ್ನುತ್ತಾನೆ ಇವನ ಇನ್ನಿಬ್ಬರು ಹಿರಿಯ ಮಕ್ಕಳು ಸಹ ಮದುವೆ ಮಾಡಿಕೊಂಡು ಪ್ರತ್ಯೇಕ ಮನೆ ಮಾಡಿಕೊಂಡು ಜೀವನ ನೆಡೆಸುತ್ತಿದ್ದಾರೆ. ಹೀಗಾಗಿ ಮನೆಯ ಪರಿಸ್ಥಿತಿ

ಕೆಟ್ಟ ಪರಿಣಾಮ ಬೀರಿತು. ತಾಯಿಯು ಸಹ ಕೆಲಸಕ್ಕೆ ಹೊಗುತ್ತಿದ್ದಳು ಮಗನಿಗೂ ಗ್ಯಾರೇಜಿಗೆ ಕಳುಹಿಸುತ್ತಿದ್ದಳು ಹೀಗಾಗಿ ಇವನು ಶಾಲೆ ಬಿಟ್ಟನು.

ಚಾಂದಪಾಷನ ಸ್ಥಿತಿ ನೋಡಿದರೆ ಮುಸ್ಲಿಂ ಸಮುದಾಯ ಎಷ್ಟು ಹಿಂದುಳಿದಿದೆ ೧೪ ವರ್ಷದ ಒಳಗಿನ ಮಕ್ಕಳು ಕೆಲಸ ಮಾಡಬಾರದೆಂದು ಬಾಲ ಕಾರ್ಮಿಕತೆಯ ನಿರ್ಮೂಲನೆಯ ಕಾನೂನು ಬಂದರು ಈ ಸಮಸ್ಯೆ ಇನ್ನೂ ಬಗೆ ಹರಿಯಲಿಲ್ಲ.

**ಪೀರನಬಿ ತಂದೆ ಮಹ್ಮದ ರಫಿ**

ಹೀನಾ ಮತ್ತು ಪೀರನಬಿ ಇವರಿಬ್ಬರು ಒಂದೇ ಮನೆಯ ಮಹ್ಮದ ರಫಿಯ ಮಕ್ಕಳು ಇವರಲ್ಲಿ ಹೀನಾಳು ೨ ನೇತರಗತಿಯಲ್ಲಿ, ಪೀರನಬಿ ೩ನೇತರಗತಿಯಲ್ಲಿ ಶಾಲೆಬಿಟ್ಟರು.

ಮಹ್ಮದರಫಿ ಆರಂಭದಲ್ಲಿ ಚೆನ್ನಾಗಿಯೇ ದುಡಿಯುತ್ತಿದ್ದ ಆದರೆ ಕಾರಣಾಂತರದಲ್ಲಿ ಇವನ ದುಡಿಮೆಯು ನಿಂತು ಹೋಯಿತು. ಹೀಗಾಗಿ ಮಹ್ಮದರಫಿ ದುಡಿಯಲು ಬೇರೆ ಊರಿಗೆ ವಲಸೆ ಹೋದರು ಹೀಗಾಗಿ ಈ ಮಕ್ಕಳು ಶಾಲೆ ಬಿಟ್ಟರು.

ಇವರ ಮನೆಯ ಸ್ಥಿತಿ ನೋಡಿದರೆ ಹೀನಳಿಗೆ ಶಾಲೆ ಬಿಡಿಸುತ್ತೇವೆ, ಏಕೆಂದರೆ ಹೆಣ್ಣು ಮಕ್ಕಳು ಎಷ್ಟು ಓದಿದರೂ ವ್ಯರ್ಥ ಎನ್ನುವ ನಂಬಿಕೆ ಇವರಲ್ಲಿ ಇತ್ತು ಆದರೆ ಮಗನ ಶಿಕ್ಷಣದ ಬಗ್ಗೆ ಕೇಳಿದಾಗ ಅನಿವಾರ್ಯವಾಗಿ ದುಡಿಯಲು ಬೇರೆ ಊರಿಗೆ ಹೋಗುವದರಿಂದ ಅವನಿಗೆ ಶಾಲೆ ಬಿಡಿಸಿದ್ದಾರೆ ಎಂದು ಭಿನ್ನಾಭೀಪ್ರಾಯ ವ್ಯಕ್ತ ಪಡಿಸಿದರು ಒಟ್ಟಿನಲ್ಲಿ ಸಮಾಜದಲ್ಲಿ ಮಹಿಳೆಯರನ್ನು ಕೇವಲ ಪುರುಷ ಪ್ರಧಾನತೆಯ ದೃಷ್ಟಿಕೋನದಲ್ಲಿಯೇ ನೋಡುವದು ಕಂಡುಬರುತ್ತದೆ.

**ಮಹ್ಮದ ತಂದೆ ಖಾಜ**

ಮಹ್ಮದ ತಂದೆ ಖಾಜ ತಾಯಿ ಚಮನಬೀ ಇವನ ವಯಸ್ಸು ೧೨, ಶಾಲೆ ಬಿಟ್ಟಿದ್ದು ೫ ನೇ ತರಗತಿಯಲ್ಲಿ ಮುಸ್ಲಿಂ ಸಮುದಾಯದಲ್ಲಿ ಪ್ರತಿಯೊಬ್ಬ ಗಂಡು ಮಗುವಿಗೂ ಮುಂಜಿ ಕಡ್ಡಾಯವಾಗಿ ಮಾಡುತ್ತಿದ್ದು ಅದೇ ರೀತಿ ಸಂಪ್ರದಾಯದ ಆಚರಣೆ ಪ್ರಕಾರ ಮಹ್ಮದನಿಗೆ ಮುಂಜಿ ಮಾಡಿಸಿದರು ಹೀಗಾಗಿ ಈ ಮಗು ಮೂರು ನಾಲ್ಕು ತಿಂಗಳುಗಳ ವರೆಗೂ ಶಾಲೆಗೆ ಹೋಗಲಿಲ್ಲ ಹೀಗಾಗಿ ನಂತರ ಶಾಲೆಗೆ ಹೋಗಲು ಎಷ್ಟು ಹೇಳಿದರು ಈ ಮಗು ಶಾಲೆಗೆ ಹೋಗಲು ನಿರಾಕರಿಸಿತು.

ಸಂಪ್ರದಾಯ ಆಚರಣೆ ಪ್ರಕಾರ ಮಾಡಿಸುವಂತ್ತಿದ್ದರು ಶಾಲೆ ಪ್ರಾರಂಭದ ಹಂತದಲ್ಲಿ ಮಾಡಬಾರದು ರಜೆಯ ದಿನದಲ್ಲಿ ಮಾಡಿಸಿದರೆ ಆ ಮಗು ಶಾಲೆಯನ್ನು ತಪ್ಪಿಸುತ್ತಿರಲಿಲ್ಲ ಶಾಲೆಗೆ ಹೋಗುದನ್ನು ನಿರಾಕರಿಸುತ್ತಿರಲಿಲ್ಲ.

**ಹಿರಿಯ ಪ್ರಾಥಮಿಕ ಶಾಲೆ (ಹಿರೇಜಂತಕಲ್)**

ಈ ಶಾಲೆಯಲ್ಲಿ ಒಟ್ಟು ೧೫ ಜನ ಶಿಕ್ಷಕರು ಕಾರ್ಯ ನಿರ್ವಹಿಸುತ್ತಿದ್ದು ಅದರಲ್ಲಿ ಮಹಿಳೆಯರು ೭ ಜನ ಪುರುಷರು ೮ ಜನರಿದ್ದಾರೆ.

ಈ ಶಾಲೆಯಲ್ಲಿ ಬಿಸಿಯೂಟದ ಯೋಜನೆ, ಶೌಚಾಲಯ, ಪಠ್ಯಪುಸ್ತಕ, ಸಮವಸ್ತ್ರ, ಆಟದ ಮೈದಾನ, ಗ್ರಂಥಾಲಯ, ಪ್ರಯೋಗಾಲಯದ ಸೌಲಭ್ಯ ಚೆನ್ನಾಗಿದೆ.

ಈ ಶಾಲೆಯಲ್ಲಿ ಒಟ್ಟು ೪ ಜನ ಹುಡುಗರು ಶಾಲೆಬಿಟ್ಟುದ್ದು ಅದರಲ್ಲಿ ಮುಸ್ಲಿಂ ಸಮುದಾಯದ ಹುಡುಗ ಒಬ್ಬನಾಗಿದ್ದಾನೆ.

**ಮೈಮುನ ತಂದೆ. ಮೆಹೆಬೂಬಸಾಬ**

ಮೈಮುನಳು ೧೪ ವರ್ಷದ ಬಾಲೆ ಇವಳ ತಂದೆ ಮೆಹೆಬೂಬಸಾಬ ಇವಳು ಶಾಲೆ ಬಿಟ್ಟದ್ದು ೭ನೇ ತರಗತಿಯಲ್ಲಿ ಮೈಮುನಳು ಓದಿನಲ್ಲಿ ತುಂಬ ಬುದ್ಧಿವಂತಳು ಶಾಲೆಯಲ್ಲಿಪ್ರತಿಯೊಂದು ವಿಷಯದಲ್ಲೂ ಅಂಕಗಳನ್ನು ತೆಗೆದು ಕೊಳ್ಳುತ್ತಿದ್ದಳು. ಅದೇ ರೀತಿ ಓದಿನಲ್ಲೂ ಮೈಮುನಳಿಗೆ ತುಂಬಾ ಆಸಕ್ತಿ.

ಪ್ರತಿಯೊಬ್ಬರು ಹೆಣ್ಣು ಮಕ್ಕಳು ನೈಸರ್ಗಿಕವಾಗಿ ೧೪ ವಯಸ್ಸಿನಲ್ಲಿ ಪ್ರಾಯಕ್ಕೆ ಬರುವಂತೆ ಮೈಮುನಳೂ ಸಹ ಋತುಮತಿ ಯಾದಳು. ಈ ಕಾರಣದಿಂದ ಅವಳನ್ನು ಶಾಲೆ ಬಿಡಿಸಿದರು. ಮೈಮುನಳ ಮನೆಯವರು ತುಂಬಾ ಸಂಪ್ರದಾಯಸ್ಥರು ಆದ್ದರಿಂದ ಅವರು ಮಗಳು ವಯಸ್ಸಿಗೆ ಬಂದ ಕೂಡಲೇ ಹೊರಗೆ ಹೋಗಬಾರದು ಮತ್ತು ಪರಪುರುಷರ ದೃಷ್ಟಿ ಇವಳ ಮೇಲೆ ಬೀಳಬಾರದೆಂದು ಇವರು ನಂಬಿದ್ದರು, ಹೀಗಾಗಿ ಇವಳಿಗೆ ಶಾಲೆ ಬಿಡಿಸಿದರು. ಆದರೆ ಅದೇರಿತಿ ಇವಳ ಅಣ್ಣತಮ್ಮಂದಿರ ಶಿಕ್ಷಣ ಮಾತ್ರ ಮುಂದುವರಸಿದ್ದರು ಹೀಗಾಗಿ ಮೈಮುನಳಿಗೆ ಶಾಲೆ ಬಿಡಿಸಿದರು.

ಮುಸ್ಲಿಂ ಸಮುದಾಯದಲ್ಲಿ ಕೆಲವೊಬ್ಬರು ಬಹಳ ಕೆಟ್ಟಸಂಪ್ರದಾಯ ಪಾಲಿಸುವವರು ಪ್ರಾಯಕ್ಕೆ ಬಂದಕೂಡಲೆ ಹೆಣ್ಣು ಮಕ್ಕಳನ್ನು ಶಾಲೆ ಬಿಡಿಸುವರು ಇನ್ನೂಕೆಲವರು ಓದಿಸಿದರೂ ಬುರುಕಾ ಹಾಕಿಕೊಂಡು ಓದಲು ಒತ್ತಾಯಿಸುತ್ತಾರೆ.

**ಸರಕಾರಿ ಹಿರಿಯ ಪ್ರಾಥಮಿಕ ಶಾಲೆ(ಉಪ್ಪಿನ ಮಳಿ ಕ್ಯಾಂಪ್).**

ಈ ಶಾಲೆಯಲ್ಲಿ ಒಟ್ಟು ೫ ಜನ ಶಿಕ್ಷಕರು ಕಾರ್ಯ ನಿರ್ವಹಿಸುತ್ತಿದ್ದು, ಅದರಲ್ಲಿ ಮಹಿಳಾ ಶಿಕ್ಷಕಿಯರು ೪ ಜನ ಪುರುಷ ಶಿಕ್ಷಕರು ಒಬ್ಬರು ಕಾರ್ಯ ನಿರ್ವಹಿಸುತ್ತಿದ್ದಾರೆ.

ಈ ಶಾಲೆಯಲ್ಲಿ ಬಿಸಿಯೂಟದ ಯೋಜನೆ, ಪಠ್ಯಪುಸ್ತಕ, ಶೌಚಾಲಯ, ಸೌಲಭ್ಯವಿದ್ದು ಕಾಂಪೌಂಡು, ಆಟದ ಮೈದಾನವು ತಕ್ಕಮಟ್ಟಿಗೆ ಇದೆ. ಗ್ರಂಥಾಲಯ ಪ್ರಯೋಗಾಲಯದ ಸೌಲಭ್ಯವಿಲ್ಲ.

ಈ ಶಾಲೆಯು ಕೊಳಚೆ ಪ್ರದೇಶದಲ್ಲಿದೆ ಅಲ್ಲಿ ವಾಸವಾದ ಜನರಲ್ಲಿ ಕೂಲಿ ಕಾರ್ಮಿಕರೇ ಹೆಚ್ಚಾಗಿದ್ದು, ಅವರು ಶೋಚನೀಯ ಜೀವನ ನಡೆಸುತ್ತಿದ್ದಾರೆ. ಒಂದು ಹೊತ್ತು ಊಟ ಸಿಗುತ್ತದೆ ಎಂದು ಶಾಲೆಗೆ ಬರುವಂತಹ ಹುಡುಗರ ಜೊತೆ ಅವರ ಕಿರಿಯ ತಂಗಿ ತಮ್ಮಂದಿರನ್ನು ಸಹ ಶಾಲೆಗೆ ಕಳಿಸುತ್ತಾರೆ ಎಂದು ಇಲ್ಲಿಯ ಶಿಕ್ಷಕರು ವ್ಯಕ್ತಪಡಿಸಿದ್ದಾರೆ.

**ಖಾದರ ಬಾಷ ತಂದೆ ಅಬ್ದುಲ ಲತೀಫ್**

ಖಾದರಬಾಷಾನು ಹುಟ್ಟನಿಂದ ಅಂಗವಿಕಲನಾಗಿದ್ದನು, ಇವನ ತಂದೆ ಅಬ್ದುಲ ಲತೀಫ್ ವಯಸ್ಸು ೧೨ ಇವನ ಕೌಟುಂಬಿಕ ಸ್ಥಿತಿಯು ತುಂಬಾ ಗಂಭೀರವಾಗಿದ್ದು, ಖಾದರನು ಇತರ ಹುಡುಗರನ್ನು ಗಮನಿಸುತ್ತ ತನ್ನ ಅಂಗವಿಕಲತೆಯ ಬಗ್ಗೆ ದು:ಖಿಸುತ್ತಿದ್ದ ೪ನೇ ತರಗತಿಯವರೆಗೆ ಖಾದರನು ಶಾಲೆಗೆ ಹೋಗಿ ನಂತರದಲ್ಲಿ ಖಾದರನ ತಂದೆ ತಾಯಿಯರೇ ಇವನ ಶಿಕ್ಷಣ ಪಡೆಯಲು ನಿರಾಸಕ್ತಿ ತೋರಿಸಿದರು. ಖಾದರನಿಗೆ ಶಿಕ್ಷಣ ಕೊಡುವುದ ವ್ಯರ್ಥ ಎಂದು ಖಾದರನ ಪಾಲಕರು ತಪ್ಪು ನಂಬಿಕೆಯಲ್ಲಿದ್ದರು ಏಕೆಂದರೆ ಖಾದರ ಅಂಗವಿಕಲನಿದ್ದ ಕಾರಣ ಅವನು ಓದುವುದು ತುಂಬಾ ಕಠಿಣ ಮತ್ತು ಯಾವ ಉದ್ಯೋಗವು ಬರುವುದಿಲ್ಲ ಎಂದು ಅವನಿಗೆ ಶಾಲೆ ಬಿಡಿಸಿದರು.

ಒಟ್ಟನಲ್ಲಿ ಇವನಸ್ಥಿತಿ ನೋಡಿದರೆ ಅಂಗವಿಕಲತೆ ಇದೆ ಎಂದು ಅವನಿಗೆ ಶಿಕ್ಷಣ ನೀಡದಿರುವುದು ದೊಡ್ಡ ತಪ್ಪು ಶಿಕ್ಷಣ ಕೊಡುವುದರಿಂದ ಅವನ ಅಭಿವೃದ್ಧಿ ಸಾಧ್ಯವಾಗುತ್ತದೆ.

**ಸರಕಾರಿ ಹಿರಿಯ ಪ್ರಾಥಮಿಕ ಶಾಲೆ (ಹೊಸಳ್ಳಿ)**

ಈ ಶಾಲೆಯು ೧೯೬೦ ರಿಂದ ಕಾರ್ಯ ನಿರ್ವಹಿಸುತ್ತಿದೆ. ಇಲ್ಲಿ ಒಟ್ಟು ಶಿಕ್ಷಕರು ೮ ಜನರಿದ್ದು ಅದರಲ್ಲಿ ೪ ಜನ ಪುರುಷರು ೪ ಜನ ಮಹಿಳೆಯರು ಕಾರ್ಯ ನಿರ್ವಹಿಸುತ್ತಿದ್ದಾರೆ.

ಈ ಶಾಲೆಯಲ್ಲಿ ಒಟ್ಟು ೨೧೯ ಜನರಿದ್ದು ಅದರಲ್ಲಿ ಗಂಡು ಮಕ್ಕಳ ಸಂಖ್ಯೆ ೧೧೦ ಹೆಣ್ಣು ಮಕ್ಕಳ ಸಂಖ್ಯೆ ೮೧ ಇದೆ. ಈ ಶಾಲೆಯಲ್ಲಿಯೂ ಎಲ್ಲಾ ಸೌಲಭ್ಯ ಉತ್ತಮವಾಗಿದೆ.

ಈ ಶಾಲೆಯಲ್ಲಿ ಒಟ್ಟು ಶಾಲೆಬಿಟ್ಟ ಮಕ್ಕಳ ಸಂಖ್ಯೆ ೭ ಇದ್ದು ಅದರಲ್ಲಿ ಮುಸ್ಲಿಂ ಸಮುದಾಯದವರು ೩ ಜನರಿದ್ದಾರೆ.

**ಚಂದೂಸಾಬ ತಂದೆ ಖಾದರ ಪಾಷ**

ಚಂದುಸಾಬ ೧೫ ವರ್ಷದವನು ಇವನ ತಂದೆ ಖಾದರಪಾಷ ಚಂದುರವರ ತಂದೆಯು ಕೂಲಿಕೆಲಸ ಮಾಡುತ್ತಿದ್ದರು. ಇವನ ದುಡಿಮೆಯಿಂದಲೇ ಮನೆಯ ನಿರ್ವಾಹಣೆ ನಡೆಯುತ್ತಿತ್ತು. ಖಾದರಪಾಷ ಆಗಾಗ ಕಾಯಿಲೆಗೆ ಬೀಳುತ್ತಿದ್ದ ಅಂತಹ ಸ್ಥಿತಿಯಲ್ಲೂ ದುಡಿಯುತ್ತಿದ್ದ, ಆದರೆ ಒಮ್ಮೆ ಚಂದುನ ತಂದೆಗೆ ಪಾರ್ಸಿ ಒಡೆಯಿತು ಅಂದಿನಿಂದ ಇವರ ಸ್ಥಿತಿ ತುಂಬಾ ಅದೋಗತಿಗಿಳಿಯಿತು ಹೀಗಾಗಿ ಅದೇ ರೀತಿ ಚಂದು ಮತ್ತು ಅವನಿಗಿಂತ ಇನ್ನಿಬ್ಬರು ಕಿರಿಯ ತಮ್ಮಂದಿರನ್ನು ಸಾಕುವ ಜವಬ್ದಾರಿ ತಾಯಿಯ ಮೇಲೆ ಬಿದ್ದಿತ್ತು. ಹೀಗಾಗಿ ತಾಯಿ ಮತ್ತು ಮಗ ಇಬ್ಬರು ದುಡಿಯಲು ಹೊಗುತ್ತಿದ್ದರು. ಹೀಗಾಗಿ ಚಂದೂ ಸಾಬ ಶಾಲೆ ಬಿಟ್ಟನು.

ಒಟ್ಟಿನಲ್ಲಿ ಚಂದುನ ಪ್ರಕರಣವನ್ನುಅವಲೋಕಿಸಿದಾಗ ಮುಸ್ಲಿಂ ಹುಡುಗರನ್ನು ಹೊರಗಿನ ದುಡಿಮೆಗೆಂದು ಅವರ ತಾಯಿತಂದೆಗಳು ಶಾಲೆಬಿಡಿಸಿದರೆ, ಮುಸ್ಲಿಂ ಹುಡುಗಿಯರಿಗೆ ಒಳ ಹಾಗು ಹೊರದುಡಿಮೆಗೆಂದು ಶಾಲೆಬಿಡಿಸುವುದು ಕಂಡುಬರುತ್ತದೆ.

**ಮಾಲನ ತಂದೆ. ಷಕ್ಷಾವಲಿ**

ಮಾಲನ ೧೦ ವರ್ಷದ ಬಾಲೆ ಮಾಲನಳ ತಂದೆ. ಷಕ್ಷಾವಲಿ ಇವಳು ಹುಟ್ಟಿದ್ದು ಹೊಸಳ್ಳಿಯಲ್ಲಿ, ಮಾಲನಳು ಇನ್ನು ಎರಡು ವರ್ಷದವಳಿದ್ದಾಗಲೆ ತಾಯಿ ತೀರಿಕೊಂಡಳು ಇವಳಿಗೆ ಇಬ್ಬರು ಅಣ್ಣಂದಿರು ಒಬ್ಬಳು ಅಕ್ಕ ಮತ್ತು ಒಬ್ಬಳು ತಂಗಿ ಇದ್ದಾಳೆ. ತಂದೆಯು ಕುಡುಕ ಮಾಲನಳ ಇಬ್ಬರು ಅಣ್ಣಂದಿರ ಮದುವೆಯಾಗಿದೆ. ಅದರಲ್ಲಿ ಒಬ್ಬ ಅಣ್ಣನ ಆಶ್ರಯದಲ್ಲಿ ಮಾಲನಳು ಜೀವನ

ನಡೆಸುತ್ತಿದ್ದಾಳೆ. ಇವಳ ಅಣ್ಣ ಮತ್ತು ಅತ್ತಿಗೆಗೆ ಒಂದು ಸಣ್ಣ ಮಗನಿದ್ದಾನೆ.ಅವಳ ಅಣ್ಣ ಮತ್ತು ಅತ್ತಿಗೆ ಪ್ರತಿದಿನ ಹೊಲಕ್ಕೆ ಹೊಗುತ್ತಿದ್ದರು, ಹೀಗಾಗಿ ಮಾಲನಳು ಮನೆಯಲ್ಲಿ ಆ ಸಣ್ಣ ಮಗುವನ್ನು ನೋಡಿಕೊಂಡುಹೋಗಲು, ಮನೆಯ ಕೆಲಸ ಮಾಡಲು ಶಾಲೆ ಬಿಡಿಸಿದರು.

ಒಟ್ಟಿನಲ್ಲಿ ಮಾಲನಳ ಸ್ಥಿತಿಯನ್ನು ಗಮನಿಸಿದರೆ ಮಾಲನಳು ಹೆಣ್ಣಿದ್ದ ಕಾರಣ ಸಹಿಸಲಾಗದಷ್ಟು ಕಷ್ಟ ಸಹಿಸ ಬೇಕಾಯಿತು.

**ಹಾಜರಾಬಿ ತಂದೆ. ಷಾಮಿದಸಾಬ**

ಹಾಜರಾಬಿಯರ ತಂದೆ ಷಾಮಿದಸಾಬ ಇವನಿಗೆ ಒಟ್ಟು ೪ ಜನ ಮಕ್ಕಳು ನಾಲ್ಕು ಜನರಲ್ಲಿ ಹಾಜರಾಬಿಯು ಒಬ್ಬಳಾಗಿದ್ದಾಳೆ.

ಹಾಜರಾಬೀಯು ೬ನೇ ತರಗತಿಗೆ ಪ್ರಾಯಕ್ಕೆ ಬಂದ ಕಾರಣ ಇವಳಿಗೆ ಶಾಲೆ ಬಿಡಿಸಿದರು. ಇವರ ಮನೆಯುವರು ಕಟ್ಟು ಸಂಪ್ರದಾಯದವರು ಹೆಣ್ಣು ಮಕ್ಕಳು ಎಷ್ಟು ಓದಿದರೂ, ಅವರಿಗೆ ಅಡುಗೆ ಮನೆ ತಪ್ಪಿದಲ್ಲ ಎಂದು ಅವಳಿಗೆ ಶಾಲೆ ಬಿಡಿಸಿದರು. ಓದಿಸುವದರಿಂದ ಯಾವುದೆ ಆದಾಯ, ಲಾಭ ಬರುವುದಿಲ್ಲ ಪುನ: ನಮ್ಮ ಹಣ ವೆಚ್ಚ ವಾಗುತ್ತದೆ ಎಂಬ ತಪ್ಪು ನಂಬಿಕೆಯಲ್ಲಿದ್ದರು.

ಆದರೆ ಅವರಿಗೆ ಹೆಣ್ಣು ಶಿಕ್ಷಿತರಾದರೆ ಇಡಿಕುಟುಂಬುವೇ ಸುಶಿಕ್ಷಿತವಾಗುತ್ತದೆ ಎಂಬ ನಂಬಿಕೆ ಇವರಲಿಲ್ಲ ಮತ್ತು ಇದರ ಅರಿವು ಸಹ ಇಲ್ಲ.

**ಸರಕಾರಿ ಕಿರಿಯ ಪ್ರಾಥಮಿಕ ಶಾಲೆ (ಮೆಹೆಬೂಬನಗರ)**

ಈ ಶಾಲೆಯು ೧೯೯೩-೯೪ ರಿಂದ ಕಾರ್ಯ ನಿರ್ವಹಿಸುತ್ತಿದ್ದು, ಇಲ್ಲಿ ಒಟ್ಟು ೫ಜನ ಶಿಕ್ಷಕಿಯರಿದ್ದು ಅದರಲ್ಲಿ ೩ಜನ ಮಹಿಳಾ ಶಿಕ್ಷಕಿಯರು ಇಬ್ಬರು ಪುರುಷರಿದ್ದಾರೆ.

ಈ ಶಾಲೆಯಲ್ಲಿ ಒಟ್ಟು ಮಕ್ಕಳ ಸಂಖ್ಯೆ ೩೫೩ ಇದ್ದು ಇದರಲ್ಲಿ ಒಟ್ಟು ಅಲ್ಪಸಂಖ್ಯಾತರು ೨೩೬ ರಿದ್ದು, ಗಂಡು ಮಕ್ಕಳು ೧೨೩ ಜನ ಹೆಣ್ಣು ಮಕ್ಕಳು ೧೧೩ ಜನರಿದ್ದಾರೆ.

ಈ ಶಾಲೆಯಲ್ಲಿ ಬಿಸಿಯೂಟದ ಯೋಜನೆ, ಪಠ್ಯಪುಸ್ತಕ ಮತ್ತು ಸಮವಸ್ತ್ರದ ಸೌಲಭ್ಯ ಚೆನ್ನಾಗಿದೆ ಆದರೆ ಕಾಂಪೌಂಡ ಇಲ್ಲ, ಆಟದ ಮೈದಾನವೂ ಸಹ ತಕ್ಕ ಮಟ್ಟಿಗಿದೆ.

**ನೂರಮಹ್ಮದ ತಂದೆ ದಾದಪೀರ**

ನೂರಮಹ್ಮದನ ತಂದೆ ದಾದಪೀರ ಇವನ ವಯಸ್ಸು ೮ ಇವನು ಶಾಲೆ ಬಿಟ್ಟದ್ದು ೨ನೇ ತರಗತಿಯಲ್ಲಿ. ಇವನು ಹುಟ್ಟಿದ್ದು ಇವನ ಅಜ್ಜಿಯ ಊರಿನಲ್ಲಿಯೆ ಅಜ್ಜಿಯೇ ಇವನಿಗೆ ಸಾಕಿ ಸಲುಹಿದಳು. ಹೀಗಾಗಿ ಅಲ್ಲೇ ಶಾಲೆಗೆ ಸೇರಿಸಿದರು. ನೂರಮಹ್ಮದ ಎರಡನೇ ತರಗತಿಯವರೆಗೆ ಅಲ್ಲೇ ಶಾಲೆ ಕಲಿತನು ಅಕಾಲದಲ್ಲಿ ಅಜ್ಜಿಯು ತೀರಿ ಕೊಂಡಳು. ಹೀಗಾಗಿ ನೂರಮಹ್ಮದನಿಗೆ ನೂರಮಹ್ಮದನ ತಂದೆ ತಾಯಿಯರು ಕರೆದುಕೊಂಡು ತಮ್ಮ ಹತ್ತಿರ ಇರಿಸಿಕೊಂಡರು ನೂರಮಹ್ಮದನ ತಂದೆ ಇವನಿಗೆ ಶಾಲೆಗೆ ಸೇರಿಸಿದರು. ಆದರೆ ಹುಟ್ಟನಿಂದ ಅಜ್ಜಿಯ ಹತ್ತಿರ ಬೆಳೆದು ಅಲ್ಲೇ ಶಾಲೆ ಕಲಿತವನು ತಂದೆ ತಾಯಿ ಹತ್ತಿರ ಶಾಲೆಗೆ ಹೋಗಲು ನಿರಾಕರಿಸಿದನು.

ತಂದೆ ತಾಯಿಯರು ಆ ಮಗುವಿನ ಮನವೊಲಿಸಿ ಕಳಿಸಬಹುದಿತ್ತು, ಆದರೆ ತಂದೆ ಮತ್ತು ತಾಯಿ ಇಬ್ಬರು ಕೆಲಸಕ್ಕೆ ಹೋಗುವದರಿಂದ ಆ ಮಗುವಿನ ಮೇಲೆ ಯಾರ ನಿರ್ವಹಣೆ ಇಲ್ಲವಾಯಿತು. ಹೀಗಾಗಿ ಶಾಲೆಗೆ ಹೋಗಲು ಆಸಕ್ತಿ ಕಳೆದುಕೊಂಡನು.

**ಆಫ್ರೀನ ತಂದೆ. ಕಾಸಿಂಸಾಬ**

ಆಫ್ರೀನಳು ಏಳು ವರ್ಷದ ಬಾಲೆ . ಇವಳ ತಂದೆ ಕಾಸಿಂಸಾಬ. ಕಾಸಿಂಸಾಬನಿಗೆ 4 ಜನ ಮಕ್ಕಳು ನಾಲ್ಕು ಜನರಲ್ಲಿ ಆಫ್ರೀನಳು ಸಹ ಒಬ್ಬಳು ಇವಳ ತಾಯಿ ಕೊನೆಯ ಮಗುವಿಗೆ ಜನ್ಮ ಕೊಟ್ಟು ತೀರಿ ಕೊಂಡಳು ಹೀಗಾಗಿ ಎಲ್ಲಾ ಮಕ್ಕಳ ಜವಬ್ದಾರಿ ತಂದೆಯ ಮೇಲೆ ಬಿದ್ದಿತು. ಈ ಎಲ್ಲ ಮಕ್ಕಳು ಅಜ್ಜಿಯ ಹತ್ತಿರವೆ ಬೆಳೆಯುತ್ತಿದ್ದರು. ತಂದೆಯ ಅಲ್ಪಸ್ವಲ್ಪ ಆದಾಯದಲ್ಲಿ ಆಫ್ರೀನಳಿಗೆ ಶಾಲೆಗೆ ಸೇರಿಸಿದರು. ಆದರೆ ಇವಳು ಶಾಲೆಗೆ ಸರಿಯಾಗಿ ಹೋಗುತ್ತಿರಲಿಲ್ಲ ಒಂದುದಿನ ಶಾಲೆಗೆ ಹೋಗುವುದು ಒಂದುದಿನ ಬಿಡುವುದು ಮಾಡುತ್ತಿದ್ದಳು ಆದರೆ ತಂದೆಯು ಮಕ್ಕಳನ್ನು ಬೈದು ಕಳಿಸುತ್ತಿರಲಿಲ್ಲ ಹೀಗೆ ಈ ಮಗು ಓದಿನಲ್ಲಿ ಅಸಕ್ತಿ ಕಳೆದುಕೊಂಡು ಶಾಲೆಗೆ ಹೋಗಲು ನಿರಾಕರಿಸಿದಳು.

ಇವಳ ಸ್ಥಿಯನ್ನು ಗಮನಿಸಿದಾಗ ತಾಯಿ ಇಲ್ಲದ ಇವಳ ಮೇಲೆ ಅಷ್ಟಲ್ಲದೆ ಇನ್ನುಳಿದ ಮಕ್ಕಳನ್ನು ನೋಡಿಕೊಳ್ಳುವ ಜವಬ್ದಾರಿ ಯಾರ ಮೇಲೂ ಇಲ್ಲವಾಯಿತು. ಅಂದರೆ ಪೋಷಕರಿದ್ದರೂ ಪೊಷಕರ ಕಾಳಜಿಯ ಕೊರತೆ ಇತ್ತು.

**ಹಿರಿಯ ಪ್ರಾಥಮಿಕ ಶಾಲೆ (ಇಸ್ಲಾಂಪೂರು)**

ಈ ಶಾಲೆಯಲ್ಲಿ ಒಟ್ಟು ೮ ಜನ ಶಿಕ್ಷಕರು ಇದ್ದಾರೆ ೪ ಜನ ಪುರುಷರು ೪ ಜನ ಮಹಿಳಾ ಶಿಕ್ಷಕಿಯರು ಇದ್ದಾರೆ ಈ ಶಾಲೆಯ ವಾತಾವರಣ ಚೆನ್ನಾಗಿದೆ.

ಬಿಸಿಯೂಟ ಯೋಜನೆ, ಶೌಚಾಲಯ, ಪಠ್ಯಪುಸ್ತಕ, ಗ್ರಂಥಾಲಯದ ಸೌಲಭ್ಯ ಉತ್ತಮವಿದೆ. ಆಟದ ಮೈದಾನ, ಕಾಂಪೌಂಡಿನ ವ್ಯವಸ್ಥೆಯು ಚೆನ್ನಾಗಿದೆ.

ಈ ಶಾಲೆಯಲ್ಲಿ ಒಟ್ಟು ೬ಜನ ಮಕ್ಕಳು ಶಾಲೆ ಬಿಟ್ಟಿದ್ದಾರೆ, ಅದರಲ್ಲಿ ಮುಸ್ಲಿಂ ಸಮುದಾಯದ ಮಕ್ಕಳು ೩ ಜನ ಇದ್ದಾರೆ.

**ಸದ್ದಾಮ ಹುಸೇನ ತಂದ ಮುಸ್ತಾಫ**

ಸದ್ದಾಮ ಹುಸೇನ ೯ ವರ್ಷದ ಬಾಲಕ ಇವನು ಶಾಲೆ ಬಿಟ್ಟಿರುವದು ೨ನೇ ತರಗತಿಯಲ್ಲಿ ಅವನ ತಂದೆ ದಿನಾಲು ಆಟೋ ನಡೆಸಲು ಹೋಗುತ್ತಾನೆ. ತಾಯಿಯೂ ಸಹ ಕೂಲಿ ಕೆಲಸಕ್ಕೆ ಹೋಗುತ್ತಾಳೆ. ಹೀಗಾಗಿ ಆ ಮಗುವಿನ ಮೇಲೆ ಸರಿಯಾದ ನಿರ್ವಾಹಣೆ ಇಲ್ಲದೆ ತನಗೆ ತಿಳಿದಾಗ ಶಾಲೆಗೆ ಹೋಗುವುದು, ಮನಸಿಲ್ಲದಾಗ ಶಾಲೆಬಿಡುತ್ತಿದ್ದನು. ಹೀಗಾಗಿ ಸದ್ದಾಂನು ಶಾಲೆಗೆ ಹೋಗುವದನ್ನು ನಿರಾಕರಿಸಿದನು.

ತಂದೆ ಅಥವಾ ತಾಯಿ ಯಾರಾದರೊಬ್ಬರ ಜುಮ್ಮೆದಾರಿ ತಮ್ಮ ಮಕ್ಕಳ ಮೇಲೆ ಇರಬೇಕು ಆದರೆ ತಂದೆ ತಾಯಿಯಾದವರು ಕೇವಲ ಹಣಗಳಿಸುವುದರಲ್ಲೇ ಮಗ್ನರಾಗಿದ್ದು ಆ ಮಗನಿಗೆ ದೈನಂದಿನ ನೋಡಿಕೊಳ್ಳುವ ಹೊಣೆಗಾರಿಕೆ ಇವರು ಹೊಂದಿರಲಿಲ್ಲ ಹೀಗಾಗಿ ಈ ಮಗು ತಂದೆ ತಾಯಿಯ ನಿರ್ಲಲಕ್ಷಗಳಿಗೆ ಒಳಗಾಗಿ ಶಾಲೆಗೆ ಹೋಗುವದನ್ನು ನಿರಾಕರಿಸಿತು.

**ಮೆಹೆರಾಜ ಪಾಷ ತಂದೆ ಅಖ್ತರಸಾಬ**

ಮೆಹೆರಾಜ ಪಾಷ ೫ ವರ್ಷದ ಬಾಲಕ ಆಖ್ತರಸಾಬನಿಗೆ ೪ ಜನಮಕ್ಕಳು ನಾಲ್ಕು ಜನರಲ್ಲಿ ಮೆಹೆರಾಜನು ಒಬ್ಬನಾಗಿದ್ದಾನೆ ಮಹೆರಾಜನು ೪ನೇಯ ತರಗತಿಯವರೆಗೆ ಶಾಲೆಗೆ ಸರಿಯಾಗಿ ಹೋಗದೆ ಮೆಹೆರಾಜನ ತಂದೆ ತಾಯಿ ಅನಕ್ಷರಸ್ಥರು ಓದಿನ ಮಹತ್ವ ತಿಳಿಯದ ಇವರು ಮೆಹೆರಾಜನಿಗೆ ಶಾಲೆಗೆ ಕಳಿಸುವುದು ವ್ಯರ್ಥ ಇದರಿಂದ ನಮ್ಮ ಹಣವೆ ವ್ಯಚ್ಛ ವಾಗುತ್ತದೆ ಎಷ್ಟು ಓದಿದರು ನೌಕರಿ ಸಿಗುವುದಿಲ್ಲ ಎಂಬ ತಪ್ಪು ನಂಬಿಕೆ ಹೊಂದಿದ್ದರು. ಪಡೆದ ಶಿಕ್ಷಣಕ್ಕೆ ಉದ್ಯೋಗ ದೊರಕುವುದಿಲ್ಲ ಎಂದು

ಶಾಲೆಬಿಡಿಸಿ ಯಾವುದಾದರು ಕೆಲಸಕ್ಕೆ ಕಳುಹಿಸಿದರೆ ಹಣವಾದರು ಗಳಿಸುತ್ತಾನೆ ಎಂದು ಮೆಹೆರಾಜನಿಗೆ ಶಾಲೆ ಬಿಡಿಸಿ ಗ್ಯಾರೆಜಿಗೆ ಸೇರಿಸಿದರು

**ರೇಷ್ಮಾ ತಂದೆ. ಅಮೀನಸಾಬ**

ರೇಷ್ಮಾಳ ತಂದೆ ಅಮೀನಸಾಬ ಇವಳು ೧೧ ವರ್ಷದ ಬಾಲೆ, ಇವಳು ಶಾಲೆಬಿಟ್ಟಿದ್ದು ೪ನೇ ತರಗತಿಯಲ್ಲಿ ರೇಷ್ಮಾಳ ಕುಟುಂಬದವರು ಕಟ್ಟುನಿಟ್ಟಿನ ಸಂಪ್ರದಾಯಸ್ಥರು ೪ನೇ ತರಗತಿಯವರೆಗೆ ಓದಿಸುವುದೇ ಬಹಳ ದೊಡ್ಡದು ಸ್ತ್ರೀ ಇರಲಿ ಪುರುಷರಿರಲಿ ಅರಬ್ಬಿ ಕಲಿಯುವುದು ಮುಸ್ಲಿಂ ಸಮುದಾಯದಲ್ಲಿ ಕಡ್ಡಾಯವಾಗಿದೆ ಎಂಬುದು ಇವರ ಅಭಿಪ್ರಾಯ ಹೀಗಾಗಿ ಔಪಚಾರಿಕ ಶಿಕ್ಷಣ ಪಡೆಯುವುದು ವ್ಯರ್ಥ ಅದರಲ್ಲೂ ಹೆಣ್ಣು ಮಕ್ಕಳಿಗೆ ಪುರುಷನ ಜೊತೆ ಶಾಲೆಗೆ ಕಳಿಸುವುದು ಸಹ ತಪ್ಪು ಎಂದು ರೇಷ್ಮಳಿಗೆ ಶಾಲೆ ಬಿಡಿಸಿ ಮದರಸಾಗೆ ಸೇರಿಸಿದರು. ರೇಷ್ಮಳಿಗೆ ಮಾತ್ರ ಸಂಪ್ರದಾಯದಂತೆ ನಡೆದುಕೊಳ್ಳಬೇಕೆಂದು ಇವರ ಮನೆಯವರಿಗಿದೆ. ಆದರೆ ಅದೇ ಗಂಡು ಮಕ್ಕಳಿಗೆ ಉನ್ನತ ಶಿಕ್ಷಣ ನೀಡುವರು.

**೮. ಹಿರಿಯ ಪ್ರಾಥಮಿಕ ಶಾಲೆ (ಹೇರೂರ)**

ಈ ಶಾಲೆಯು ೧೯೩೪ ರಿಂದ ಕಾರ್ಯನಿರ್ವಹಿಸುತಿದ್ದು, ಒಟ್ಟು ೧೪ ಜನ ಶಿಕ್ಷಕರು ಕಾರ್ಯನಿರ್ವಹಿಸುತ್ತಿದ್ದು ಅದರಲ್ಲಿ ಮಹಿಳಾ ಶಿಕ್ಷಕಿಯರು ೪ಜನ, ಪುರುಷ ಶಿಕ್ಷರು ೫ ಜನರಿದ್ದಾರೆ.

ಈ ಶಾಲೆಯ ಭೌತಿಕ ವಾತವರಣ ತುಂಬ ಚೆನ್ನಾಗಿದೆ. ಬಿಸಿಯೂಟ ಯೋಜನೆ, ಉಚಿತ ಪಠ್ಯಪುಸ್ತಕ, ಸಮವಸ್ತ್ರ, ಶೌಚಾಲಯ, ಕುಡಿಯುವ ನೀರಿನ ಸೌಲಭ್ಯವಿದೆ. ಅದೇ ರೀತಿಗ್ರಂಥಾಲಯ ಮತ್ತು ಪ್ರಯೋಗಾಲಯದ ಸೌಲಭ್ಯವು ಚೆನ್ನಾಗಿದೆ.

ಹೇರೊರಿನಲ್ಲಿ ಒಣಭೂಮಿ ಬೇಸಾಯ ಇರುವುದರಿಂದ ಬಹಳಷ್ಟುಜನ ಬೇಸಿಗೆಯಲ್ಲಿ ವಲಸೆ ಹೊಗುವವರು ಹೀಗಾಗಿ ಇಲ್ಲಿ ಮಧ್ಯದಲ್ಲೆ ಶಾಲೆ ಬಿಟ್ಟ ಮಕ್ಕಳ ಸಂಖ್ಯೆ ಹೆಚ್ಚು ಕಂಡು ಬರುತ್ತದೆ. ಒಟ್ಟು ೨೭ ಜನ ಈ ಶಾಲೆಯಲ್ಲಿ ಶಾಲೆ ಬಿಟ್ಟಿದ್ದಾರೆ. ಅಂದರೆ ದಾಖಲಾಗಿ ಮಧ್ಯದಲ್ಲಿ ಶಾಲೆ ಬಿಟ್ಟಿದ್ದಾರೆ ಅದರಲ್ಲಿ ಮುಸ್ಲಿಂ ಸಮುದಾಯದವನು ಕೇವಲ ಒಬ್ಬನಿದ್ಧಾನೆ.

**ಮೆಹೆಬೂಬಸಾಬ ತಂದೆ. ಜಂಗ್ಲೀಸಾಬ**

ಜಂಗ್ಲೀಸಾಬನಿಗೆ ಒಟ್ಟು ೩ ಜನ ಗಂಡು ಮಕ್ಕಳು ಅದರಲ್ಲಿ ಮಹೆಬೂಬ ಸಾಬನು ಒಬ್ಬನಾಗಿದ್ದಾನೆ ಇವನ ತಂದೆ ಒಂದು ಹೋಟಲ್ ಇಟ್ಟುಕೊಂಡು, ಕೆಲಸಕಾರ್ಯ ನಡಸಿಕೊಂಡು ಹೋಗುತ್ತಿದ್ದನು ಇವನ ಮಗ ೩ನೇಯ ತರಗತಿಯವರೆಗೆ ಶಾಲೆ ಕಲಿತನು ಆದರೆ ದುರ್ದೈವ ಇವನು ಶಿಕ್ಷಣ ಮುಂದುವರೆಸಬೇಕೆಂದಾಗ ಮಹೆಬೂಬನ ತಂದೆ ಅನಾರೋಗ್ಯಕ್ಕೆ ತುತ್ತಾದನು. ಹೀಗಾಗಿ ಹೋಟೆಲ್ ನಡೆಸಿಕೊಂಡು ಹೋಗಲುಮತ್ತು ತಂದೆಯನ್ನು ನೋಡಿಕೊಂಡು ಹೊಗುವ ಸಲುವಾಗಿ ಈ ಮಗುವನ್ನು ಶಾಲೆ ಬಿಡಿಸಿದರು.

ಹಿರಿಯ ಅಣ್ಣಂದಿರು ಇದ್ದರು ಮದುವೆಯಾಗಿ ಬೇರೆಯಾದರು ತಾಯಿ ಒಬ್ಬಳೇ ಗಂಡ ಮತ್ತು ಮನೆಯ ಸಂಸಾರ ನೋಡಿಕೊಂಡು ಹೋಗುತಿದ್ದಳು ಹೀಗಾಗಿ ತನ್ನ ಮಗ ತನಗೆ ಸಹಾಯವಾಗುವನು ಎಂದು ತಿಳಿದು ಅವನಿಗೆ ಶಾಲೆಗೆ ಹೋಗಲು ನಿರಾಕರಿಸಿದಳು.

**೮. ಹಿರಿಯ ಪ್ರಾಥಮಿಕ ಶಾಲೆ (ಸಂಗಾಪೂರ)**

ಈ ಶಾಲೆಯಲ್ಲಿ ಒಟ್ಟು ೭ಜನ ಶಿಕ್ಷರು ಕಾರ್ಯನಿರ್ವಹಿಸುತ್ತಿದ್ದು ಅದರಲ್ಲಿ ಮಹಿಳಾ ಶಿಕ್ಷಕಿಯರು ೩ ಜನ ಪುರುಷ ಶಿಕ್ಷರು ೪ ಜನ ಕಾರ್ಯ ನಿರ್ವಹಿಸುತ್ತಿದ್ದಾರೆ.

ಈ ಶಾಲೆಯ ಭೌತಿಕ ಪರಿಸರವು ತುಂಬಾ ಚೆನ್ನಾಗಿದೆ. ಬಿಸಿಯೂಟ, ನೀರಿನಸೌಲಬ್ಯ, ಶೌಚಾಲಯ, ಪಠ್ಯಪುಸ್ತಕ, ಸಮವಸ್ತ್ರ, ಕಂಪ್ಯೂಟರ್‌ನ ಸೌಲಭ್ಯ ಗ್ರಂಥಾಲಯ ಪ್ರಯೋಗಾಲಯದ ಸೌಲಭ್ಯ ಉತ್ತಮವಾಗಿದೆ. ಮತ್ತು ಆಟದ ಮೈದಾನ, ಕಾಂಪೌಂಡಿನ ಸೌಲಭ್ಯವು ಉತ್ತಮವಾಗಿದೆ.

**ತಾಸಿನ ತಂದೆ ಶಾಮಿದಸಾಬ**

ತಾಸಿನಳು ೮ ವರ್ಷದ ಬಾಲೆ ಇವಳ ತಂದೆ ಶ್ಯಾಮಿದಸಾಬ ಈ ಹುಡುಗಿ ಶಾಲೆಗೆ ಪ್ರತಿದಿನ ಸರಿಯಾಗಿ ಬರುತ್ತಿರಲಿಲ್ಲ ಮತ್ತು ಶಿಕ್ಷಕರು ಮನೆಗೆಲಸ ಕೊಟ್ಟರು ಅದನ್ನು ಸರಿಯಾಗಿ ಮಡದೇ ಹಾಗೆಯೇ ಬರುತ್ತಿದ್ಧಳು ಈ ರೀತಿ ಇವಳು ಮಾಡಲುಕಾರಣ ತಾಸಿನಳ ಮನೆತನ ತುಂಬಾ ಬಡತನದಲ್ಲಿದ್ಧು ತಂದೆ ಮತ್ತು ತಾಯಿ ಇಬ್ಬರುಸಹ ದುಡಿಯಲು ಹೋಗುತ್ತಿದ್ದರು ಹಿಗಾಗಿ ಇನ್ನಿಬ್ಬರು ಸಣ್ಣಮಕ್ಕಳ್ಳನ್ನು ನೋಡಿ ಕೊಳ್ಳುವ ಹೊಣೆಯು ಇವಳಮೇಲೆ ಬಿದ್ದಿತು. ಹೀಗಾಗಿ ತಾಸಿನಳಿಗೆ

ಶಾಲೆಯಲ್ಲಿ ಕೊಟ್ಟಿರುವ ಯಾವ ಚಟುವಟಿಕೆಯು ಮಾಡಲು ಆಗುತ್ತಿರಲಿಲ್ಲ. ಹೀಗಾಗಿ ಶಿಕ್ಷಕರಿಂದ ದಿನಾಲು ಬೈಸಿಕೊಳ್ಳುವುದು ಹೊಡೆಸಿಕೊಳ್ಳುತ್ತಿದ್ಧಳು, ಹೀಗಾಗಿ ತಾಸಿನಳು ಶಾಲೆ ಬಿಡಲು ಪ್ರಾರಂಬಿಸಿದಳು ಶಿಕ್ಷಕರು ಏಷ್ಟುಮನ ವಲಿಸಿದರೂ ಅವಳು ಶಾಲೆಗೆ ಬರಲು ನಿರಾಕರಿಸಿದಳು.

**ಮೌಲಾಬಿ ತಂದೆ ಮೋಹಿನುದ್ಧೀನ**

ಮೌಲಾಬಿಯ ತಂದೆ ಮೊಹಿನುದ್ಧೀನ ಇವಳು ೧೩ ವರ್ಷದ. ಹುಡುಗಿ ಶಾಲೆಬಿಟ್ಟಿರುವುದು ೭ನೇ ತರಗತಿಯಲ್ಲಿ ಇವಳಪಾಲಕರು ಮೌಲಬಿಗೆ ಶಾಲೆಗೆ ಹೋಗುವುದು ತಡೆದರು. ಇವಳಿಗೆ ಶಾಲೆ ಬಿಡಿಸಲು ಕಾರಣ ಮೌಲಬಿಯು ಋತುಮತಿಯಾದಳು ಹೀಗಾಗಿ ಪ್ರಾಯಕ್ಕೆ ಬಂದಂತಹ ಮಕ್ಕಳು ಮನೆಯಿಂದ ಹೊರಗೆ ಹೋಗಬಾರದು ಅಲ್ಲದೆ. ಹೆಣ್ಣುಮಕ್ಕಳಿಗೆ ಓದಿಸುವುದರಿಂದ ಏನುಪ್ರಯೋಜನವಿಲ್ಲ ಏಕೆಂದರೆ ಮದುವೆ ಮಾಡಿಕೊಡುವುದು ತಪ್ಪುವದ್ದಿಲ್ಲ ಹೀಗಾಗಿ ಅದು ಬೇರೆಯವರ ಮನೆಗೆ ಲಾಭವಾಗುತ್ತದೆ ಅದೇಗಂಡು ಮಕ್ಕಳಿಗೆ ಓದಿಸಿದರೆ. ಮನೆಮಗ ಎಲ್ಲಾನಮಗೆ ಮನೆಯಲ್ಲಿಯೇ ಇರುತ್ತದೆ. ಎನ್ನುವುದು ಇವರ ಮನೆಯವರ ಅಭಿಪ್ರಾಯ ಹೀಗಾಗಿ ಮೌಲಾಬಿಗೆ ಶಾಲೆಬಿಡಿಸಿದರು.

ಈನನ್ನ ಅಧ್ಯಯತ್ಮಕ್ಕ ಶಾಲೆಯನ್ನು ಆಯ್ಕೆ ಮಾಡಿಕೊಂಡು ಕ್ಷೇತ್ರಕಾರ್ಯ ನಡೆಸುವದರಿಂದ. ಪರಿಪೂರ್ಣವಾಗದು ಎಂದು ತಿಳಿದು ೭ ನೇ ತರಗತಿಯಲ್ಲಿ ಶಾಲೆ ಬಿಟ್ಟ ಮಕ್ಕಳು ಮತ್ತು ಮೂವತ್ತು ವರ್ಷದ, ಒಳಗಿನ ಮಹಿಳೆಯರನ್ನು ಸಹ ಆಯ್ಕೆಮಾಡಿಕೊಂಡು ಕ್ಷೇತ್ರ ಕಾರ್ಯ ಮಾಡಿ ಪ್ರಕರಣ ಅಧ್ಯಯನದ ಅನುಭವ ಈ ಮುಂದಿನಂತೆ ವಿವರಿಸಿದ್ದೇನೆ.

**ಬಿಬೀಜಾನ್ ಗಂಡ ಸಲೀಮ್‌ಬಾಷಾ**

ಬಿಬೀಜಾನ್ ಸುಮಾರು ೨೭ನೇ ವಯಸ್ಸಿನ ಒಬ್ಬ ಸುಂದರ ಯುವತಿ ಇವಳ ತಂದೆ ಮುಷಕಿನ್ ಸಾಬ್ ತಾಯಿ ಅಜೀಜಾ ಬೇಗಂ ಇವರಿಗೆ ಒಟ್ಟು ೮ ಜನ ಮಕ್ಕಳು ಆರು ಮಂದಿ ಹೆಣ್ಣು ಮಕ್ಕಳಲ್ಲಿ ಬಿಬಿ ನಾಲ್ಕನೇಯ ಮಗಳು ಇವಳ ತಂದೆ ಕೂಲಿ ಕೆಲಸದಲ್ಲಿ ಹಲವಾರು ತೊಂದರೆಗಳು ಅನುಭವಿಸಿದರು. ಹೀಗಾಗಿ ಇವಳು ಶಿಕ್ಷಣವನ್ನು ಪಡೆಯಲು ಆಗಿರಲಿಲ್ಲ.

ಮೊದಲು ಮೂರು ಹಿರಿಯ ಮಕ್ಕಳು ಕೇವಲ ಎರಡು, ಮೂರನೇ ತರಗತಿಯ ವರೆಗೆ ಮಾತ್ರ ಶಿಕ್ಷಣವನ್ನು ಪಡೆದುಕೊಂಡರು. ತಂದೆಯ ಆದಾಯ ಕಡಿಮೆ ಇರುವುದರಿಂದ ದೈನಂದಿನ ಜೀವನದ

ನಿರ್ವಾಹಣೆಗೆ ಕಷ್ಟವಾಗುವ ಸಂದರ್ಭದಲ್ಲಿ ಶಿಕ್ಷಣವು ದೂರದ ಮಾತು ಮನೆಯಲ್ಲಿ ಎಲ್ಲಾರು ಅದರಲ್ಲಿ ಹೆಣ್ಣು ಮಕ್ಕಳು ಊದಿನಕಡ್ಡಿಯನ್ನು ತಯಾರಿಸುತ್ತಿದ್ದರೆ. ಇನ್ನು ಬಿಬಿ ಮಾತ್ರ ಹೊರಗಿನ ಕೆಲಸ ಅಂದರೆ ಗಂಡು ಮಕ್ಕಳು ಸಣ್ಣವರಿದ್ದ ಕಾರಣದಿಂದ ಅಂಗಡಿಗೆ, ಸಂತೆಗೆ ಹೋಗಿ ಆಡುಗಳಿಗೆ ಹುಲ್ಲು ತರುವುದು ಎಲ್ಲಾ ಕೆಲಸ ಇವಳೇ ಮಾಡುತ್ತಿದ್ದಳು. ಹೀಗಾಗಿ ಓದುವದರಲ್ಲಿ ಅವಕಾಶ ಕಡಿಮೆಯಾಗಿ ಪ್ರತಿದಿನ ಶಾಲೆಗೆ ಸರಿಯಾಗಿ ಹೋಗುತ್ತಿರಲಿಲ್ಲ ತನಗೆ ಇತರರಿಗಿಂತ ಸರಿಯಾಗಿ ಓದಲು ಬರೆಯಲು ಬರುವುದಿಲ್ಲ ಎಂದು ಶಾಲೆಯನ್ನು ಬಿಟ್ಟಳು ಇವಳ ತಂಗಿಯರು ಸಹ ಸರಿಯಾಗಿ ಶಾಲೆಗೆ ಹೋಗದೇ ಇರುವದರಿಂದ ೪, ೫ನೇ ತರಗತಿಯಲ್ಲೇ ಶಾಲೆ ಬಿಟ್ಟರು.

ಬಿಬಿಗೆ ೧೫ನೇ ವಯಸ್ಸಿನಲ್ಲಿಯೇ ಇವಳ ತಂದೆ ತಾಯಿಯರು ಮದುವೆ ಮಾಡಿಕೊಟ್ಟರು. ಇವಳ ಗಂಡ ಆಟೋ ಡ್ರೈವರ್ ಆರು ವರ್ಷದಲ್ಲಿಯೇ ಮೂರು ಜನ ಮಕ್ಕಳಿಗೆ ಜನ್ಮ ನೀಡಿದಳು. ಗಂಡನ ದುಡಿಮೆಯು ಅಷ್ಟರ ಮಟ್ಟಿಗೆ ಇತ್ತು ಆದರೆ ಇವಳು ಮೂರು ಮಕ್ಕಳಿಗೂ ಶಾಲೆಗೆ ಸೇರಿಸಿದ್ದಾಳೆ. ಇವಳು ತನ್ನ ಒಬ್ಬಳು ಮಗಳಿಗೆ ಒಳ್ಳೆಯ ಶಿಕ್ಷಣ ನೀಡಬೇಕೆನ್ನುವುದೇ ಇವಳ ಆಸೆ ಏಕೆಂದರೆ ತಾನಾದರು ಶಿಕ್ಷಣ ಪಡೆಯಲಿಲ್ಲ ತನ್ನ ಮಗಳಿಗಾದರೂ ಒಳ್ಳೆಯ ಸುಶಿಕ್ಷಿತಳನ್ನಾಗಿ ಮಾಡುವುದು ಇವಳ ಆಸೆ.

ಬೀಬಿಯ ನಿರ್ಣಯ ಮೆಚ್ಚಬಹುದು. ಏಕೆಂದರೆ ತಾನಾದರೂ ಶಿಕ್ಷಣ ಪಡೆಯಲಿಲ್ಲ ತನ್ನ ಮಗಳಿಗೆ ಶಿಕ್ಷಣ ಕೊಡುವ ಆಸೆ ಇವಳಲ್ಲಿದೆ.

**ಆಷ ತಂದೆ ಗಫೂರ್ ಸಾಬ್**

ಆಷಳು ಹದಿನೆಂಟು ವಯಸ್ಸಿನ ಯುವತಿ ಇವಳ ತಂದೆ ಗಫೂರ್‌ಸಾಬ್ ತಾಯಿ ಮುಮತಾಜ್ ಇವನಿಗೆ ಇಬ್ಬರು ಗಂಡು ಮಕ್ಕಳು ನಾಲ್ಕುಜನ ಹೆಣ್ಣು ಮಕ್ಕಳು ನಾಲ್ಕು ಜನ ಹೆಣ್ಣು ಮಕ್ಕಳಲ್ಲಿ ಆಷಳು ಎರಡನೆಯ ಮಗಳು ತಂದೆ ರಿಕ್ಷಾ ನಡೆಸುತ್ತಾನೆ. ತಾಯಿಯು ಪಾತ್ರೆ ತೊಳೆಯಲು ಹೋಗುತ್ತಾಳೆ. ಹೀಗಾಗಿ ಹಿರಿಯ ಮಗಳಿಗೆ ಕೇವಲ ೪ನೇ ತರಗತಿಯವರೆಗೆ ಮಾತ್ರ ಓದಿಸಿ ಮದುವೆ ಮಾಡಿಕೊಟ್ಟಿದ್ದಾರೆ. ಆದರೆ ಆಷಳಿಗೆ ಆರನೇ ತರಗತಿವರೆಗೆ ಶಾಲೆಗೆ ಕಳಿಸಿ ಇವಳು ಋತುಮತಿಯಾದ ಕಾರಣ ಪ್ರಾಯಕ್ಕೆ ಬಂದ ಹೆಣ್ಣು ಮಕ್ಕಳಿಗೆ ಮನೆಯಿಂದ ಹೊರಗೆ ಕಳುಹಿಸಬಾರದೆಂದು ಶಾಲೆಬಿಡಿಸಿದರು.

ಆದರೆ ಆಷಳಿಗೆ ಓದುವದರಲ್ಲಿ ತುಂಬಾ ಆಸಕ್ತಿ ಇತ್ತು ಕೌಟುಂಬಿಕ ಸ್ಥಿತಿ ಮನೆಯಲ್ಲಿಯ ಸಂಪ್ರದಾಯ ಆಚರಣೆಗಳಿಂದ ಇವಳಿಗೆ ಶಾಲೆ ಬಿಡಿಸಿದರು. ಆದರೆ ಇವಳ ಜೊತೆಯಲ್ಲಿರುವ ಇವಳ ಇತರೆ ಗೆಳತಿಯರು ತಮ್ಮ ವಿದ್ಯಾಭ್ಯಾಸವನ್ನು ಮುಂದುವರೆಸಿದರು. ಅವಳನ್ನು ನೋಡಿ ಆಷಳು ತುಂಬಾ ಮರುಗಿದಳು. ಇವಳಿಗೆ ಮದುವೆ ಮಾಡಿಕೊಡಬೇಕೆಂದು ಸಂಬಂಧ ನೋಡಿ ಮಾತುಕತೆಯಾಗಿದೆ. ಇವಳ ಇನ್ನಿಬ್ಬರು ತಂಗಿಯರಿಗೆ ೫ನೇ ತರಗತಿವರೆಗೆ ಶಾಲೆ ಕಳಿಸಿ ಶಾಲೆ ಬಿಡಿಸಿದ್ದಾರೆ. ಇವಳ ಸ್ಥಿತಿಯನ್ನು ನೋಡಿದರೆ ಮುಸ್ಲಿಂ ಸಮುದಾಯದಲ್ಲಿ ಇನ್ನು ಸಂಪ್ರದಾಯ ಆಚರಣೆಗಳನ್ನು ಪಾಲಿಸುತ್ತಿದ್ದಾರೆ. ಇದರಿಂದ ಅವರಿಗೆ ಸರಿಯಾದ ಶಿಕ್ಷಣ ನೀಡದೇ ಅವರ ಇಡೀ ಜೀವನವನ್ನೇ ಹಾಳು ಮಾಡುತ್ತಿದ್ದಾರೆ. ಹೀಗಾಗಿ ಇಂತಹವರಿಗೆ ಶಿಕ್ಷಣದ ಮಹತ್ವದ ಬಗ್ಗೆ ತಿಳಿಹೇಳುವದು ಅಗತ್ಯವಾಗಿದೆ.

**ರಹಿಮಾ ತಂದೆ ಯುಸೂಫ್‌ಸಾಬ್**

ರಹಿಮಾಳು ಹದಿನೆಂಟು ವರ್ಷದ ಯುವತಿ ಇವಳ ತಂದೆ ಯುಸುಪಸಾಬ ತಾಯಿ ನಾಸಿರಾ ಇವರಿಗೆ ೬ ಜನ ಮಕ್ಕಳು ಆರು ಜನರಲ್ಲಿ ಒಬ್ಬನು ಗಂಡು ಮಗ ಉಳಿದವರು ಹೆಣ್ಣು ಮಕ್ಕಳು ರಹಿಮಾ ಒಂದು ವರ್ಷದವಳಿದ್ದಾಗಲೇ ಇವಳ  ತಂದೆ ತೀರಿಕೊಂಡನು. ಆ ಮಕ್ಕಳ ಹೊಣೆಗಾರಿಕೆ ತಾಯಿಯ ಮೇಲೆ ಬಿದ್ದಿತ್ತು ಮಗನಿಗೂ ಶಾಲೆಬಿಡಿಸಿ ಕೆಲಸಕ್ಕೆ ಸೇರಿಸಿದರು ತಾಯಿಯು ಕೆಲಸ ಮಾಡಿ ಮಕ್ಕಳನ್ನು ಜೋಪಾನ ಮಾಡುತ್ತಿದ್ದಳು.

ಒಂದು ಹೊತ್ತು ಊಟಕ್ಕೆ ಗತಿ ಇಲ್ಲದ ಸಂದರ್ಭದಲ್ಲಿ ಇವರಿಗೆ ಶಾಲೆಗೆ ಸೇರಿಸುವುದು ತುಂಬ ಕಷ್ಟದ ಕೆಲಸ ಹೀಗಾಗಿ ಎಲ್ಲಾರಿಗೂ ಅದರಲ್ಲಿ ರಹಿಮಳಿಗೂ ಮದರಸಾಕ್ಕೆ ಸೇರಿಸಿದರು ಮುಸ್ಲಿಧರ್ಮದಲ್ಲಿ ಸ್ತ್ರೀಪುರುಷರು ಕಡ್ಡಾಯವಾಗಿ ಕುರಾನ  ಪಟಣ ಮಾಡಬೇಕು. ಔಪಚಾರಿಕ ಶಿಕ್ಷಣ ವಿಲ್ಲದಿದ್ದರು ಅನೌಪಚಾರಿಕ ಶಿಕ್ಷಣವನ್ನು ಪಡಿಯಲೇಬೇಕು. ಹೀಗಾಗಿ ಮದರಾಸಾಕ್ಕೆ ಸೇರಿಸಿದರು ಇವಳ ಅಣ್ಣನೇ ಕೂಲಿಮಾಡಿ ಸಾಕುತ್ತಿದ್ದನು ಆದರೆ ವಿವಾಹವಾದ ಬಳಿಕ ಇವಳ ಅಣ್ಣ ಏಡ್ಸ್ ಕಾಯಿಲೆಗೆ ತುತ್ತಾಗಿ ಮರಣ ಹೊಂದಿದ. ಇವಳ ಹೆಂಡತಿಯು ಒಂದು ವರ್ಷದಲ್ಲಿ ಮರಣಹೊಂದಿದಳು. ಆಗ ಅವರಿಗಿದ್ದ ಇಬ್ಬರ ಮಕ್ಕಳ ಪಾಲನೆ ಪೋಷಣೆಯು ಇವರ ಮೇಲೆ ಬಿದ್ದಿತು. ರಹೀಮಾಳ ಅಕ್ಕಂದಿರನ್ನು ವಿವಾಹ ಮಾಡಿ ಕೊಟ್ಟಿರುವದರಿಂದ ತಾಯಿಯು ಕೆಲಸಕ್ಕೆ ಹೋಗುವಳು

ಹೀಗಾಗಿ ಆ ಮಕ್ಕಳನ್ನು ನೋಡಿಕೊಂಡು ಹೋಗಲು ಮತ್ತು ಆರ್ಥಿಕ ತೊಂದರೆ ಇರುವುದರಿಂದ ಶಾಲೆಗೆ ಸೇರಿಸಲಿಲ್ಲ ಕೆಲವೊಂದು ಸಲ ರಹಿಮಳು ಪಾತ್ರೆ ತೊಳೆಯಲು ಹೋಗುತ್ತಾಳೆ.

ರಹಿಮಳ ಸ್ಥಿತಿನೋಡಿದರೆ ತುಂಬಾ ಶೋಚನಿಯವಾಗಿದೆ ಬಾಲ್ಯದಲ್ಲಿಯೇ ತಂದೆಯ ಪ್ರೀತಿ ಕಾಣದೇ ತಾಯಿಯು ಕೆಲಸಕ್ಕೆ ಹೋಗುವದರಿಂದ ಅವಳ ಪ್ರೀತಿಯನ್ನು ಪಡೆಯಲಿಲ್ಲ ಓದು ಆಟ ಪಾಠ ಕಲಿಯುವ ಸಂದರ್ಭದಲ್ಲಿ ಅಡಿಗೆ ಮನೆ ಕೆಲಸ ಮಕ್ಕಳ ಪಾಲನೆಯ ಜವಬ್ದಾರಿ ರಹಿಮಳ ಮೇಲೆಯೇ ಬಿದ್ದಿತು.

ಬೇಗಂ ಗಂಡ ಹುಸೇನಸಾಬ

ಬೇಗಂಗೆ ೨೮ ವಯಸ್ಸು ಇವಳ ತಂದೆ ಹುಸೇನಪೀರ ತಾಯಿ ಶರಿಫಾ ಇವಳು ಹುಟ್ಟಿದ್ದು ಸೊಂಡೂರಿನಲ್ಲಿ ಇವಳು ತುಂಬಾ ಬಡತನದ ಕುಟುಂಬದಲ್ಲಿ ಬೆಳೆದಿದ್ದಾಳೆ ಇವಳಿಗೆ ಇಬ್ಬರು ಹಿರಿಯ ಅಕ್ಕಂದಿರು ಮತ್ತು ಇಬ್ಬರು ಅಣ್ಣಂದಿರು ಇದ್ದಾರೆ ಹಿರಿಯ ಅಕ್ಕಳಿಗೆ ಇತರ ಮಕ್ಕಳನ್ನು ನೋಡಿಕೊಳ್ಳಲು ಶಾಲೆಬಿಡಿಸಿದರು. ಅಣ್ಣಂದಿರಿಗೂ ಸ್ವಲ್ಪ ಮಟ್ಟಿಗೆ ಶಿಕ್ಷಣ ಕೊಟ್ಟು ಶಾಲೆ ಬಿಡಿಸಿದರು. ಬೇಗೆಂಳ ತಂದೆ ಮತ್ತು ತಾಯಿ ಇಬ್ಬರೂ ಸಹ ಮೈನ್ಸ್ ಕೆಲಸಕ್ಕೆ ಹೋಗುತ್ತಿದ್ದರು. ಇವರು ಸೊಂಡೂರಿನ ಹತ್ತಿರ ಒಂದು ಸಣ್ಣ ಹಳ್ಳಿಯಲ್ಲಿ ಇದ್ದರು ಬೇಗಂಳಿಗೆ ಸೊಂಡೂರಿನ ಶಾಲೆಗೆ ಸೇರಿಸಿದರು. ಆದರೆ ಇವಳ ಶಾಲೆಗೆ ೫ ಕಿಲೋ ಮೀಟರ ದೂರದಲ್ಲಿ ಹೋಗಬೇಕಾದರೆ ವಾಹನದಲ್ಲಿಯೇ ಹೋಗಬೇಕಾಗಿತ್ತು. ಅದರೆ ಸೊಂಡೂರಿಗೆ ಹೋಗಲು ಬಸ್ಸಿನ ಸೌಲಬ್ಯ ಇರದೇ ಇರುವುದರಿಂದ ಲಾರಿಯಲ್ಲಿ ಶಾಲೆಗೆ ಹೋಗ ಬೇಕಾಗಿತು. ಹೀಗಾಗಿ ಇವರ ತಂದೆ ಕಾಲ ತುಂಬಾ ಸೂಕ್ಷ್ಮವಾಗಿದೆ ಎಂದು ೫ ನೇ ತರಗತಿಯಲ್ಲಿಯೇ ಶಾಲೆ ಬಿಡಿಸಿ ಸಣ್ಣ ವಯಸ್ಸಿನಲ್ಲಿಯೆ ಗಂಗಾವತಿಯಲ್ಲಿ ಒಬ್ಬ ಕಾರ್ಪೆಂಟರನಿಗೆ ಕೊಟ್ಟು ವಿವಾಹಮಾಡಿದರು.

ಬೇಗಂಳು ೪ ಜನ ಹೆಣ್ಣು ಮಕ್ಕಳಿಗೆ ಇಬ್ಬರು ಗಂಡು ಮಕ್ಕಳಿಗೆ ಜನ್ಮನೀಡಿದಳು. ಬೇಗಂಳು ತಾನೂ ಶಿಕ್ಷಣ ಪಡೆಯಲಿಲ್ಲ ತನ್ನ ಮಕ್ಕಳಿಗಾದರೂ ಒಳ್ಳೆಯ ಶಿಕ್ಷಣ ನೀಡಬೇಕೆಂದು ನಂಬಿದ್ದಳು ಆದರೆ ಹಿರಿಯ ಮಗಳ ಪರಿಸ್ಥಿತಿಯು ತನ್ನ ಕಿರಿಯ ತಮ್ಮ ತಂಗಿಯರಿಗೆ ನೊಡಿಕೊಂಡು ಹೋಗುವ ಸಲುವಾಗಿ ಶಾಲೆ ಬಿಡಿಸಿದರು. ಇನ್ನು ಇಬ್ಬರು ಮಕ್ಕಳಿಗೆ ಶಿಕ್ಷಣ ನೀಡಬೇಕೆಂದರೆ ಅವರು ಓದಿನಲ್ಲಿ ನಿರಾಸಕ್ತಿ ತೆಳೆದಿದ್ದು ಶಾಲೆಗೆ ಹೋಗುತ್ತಿಲ್ಲ ಎಂದು ಬಿಡಿಸಿದಳು. ಕಿರಿಯ ಮಗಳು ೭ನೇಯ ತರಗತಿ

ಓದುದುತಿದ್ದಾಳೆ. ಅವಳಿಗಾದರು ಒಳ್ಳೆಯ ಶಿಕ್ಷಣ ನೀಡಿ ಉನ್ನತ ಶಿಕ್ಷಣದವರಗೆ ಅವಳಿಗೆ ಓದಿಸಬೇಕು ಎಂಬುದು ಬೇಗಂಳ ಆಸೆ.

**ಸಾಹೇರಾ ಗಂಡ ಅಲ್ಲಾಬಕ್ಷಿ**

ಸಾಹೇರಳ ತಂದೆ ಹುಸೇನಸಾಬ್ ತಾಯಿ ಮೈಮುನಾ ಇವಳಿಗೆ ೩೦ ವರ್ಷವಿದೆ. ಇವಳು ಹುಟ್ಟಿದ್ದು ಹರಪನಹಳ್ಳಿಯಲ್ಲಿ ಇವಳಿಗೆ ಇಬ್ಬರು ಅಕ್ಕಂದಿರು ಇಬ್ಬರು ಅಣ್ಣಂದಿರು ಇದ್ದರು. ಇವಳ ತಂದೆ ಪಾನ್‌ಶಾಪ್ ಇಟ್ಟಿದ್ದನು. ತಾಯಿ ಬೀಡಿ ಕಟ್ಟುತ್ತಿದ್ದಳು ಇವಳ ಇಬ್ಬರು ಅಕ್ಕಂದಿರು ಹುಟ್ಟಿನಿಂದ ಅಂಗವಿಕಲತೆಗೆ ತುತ್ತಾಗಿದ್ದರು. ಹನ್ನೆರಡು ವಯಸ್ಸಿನಲ್ಲಿ ಇವರಿಬ್ಬರೂ ತೀರಿಕೊಂಡರು ಹೀಗಾಗಿ ಅವರಿಗೆ ಶಾಲೆಗೆ ಸೇರಿಸಲಿಲ್ಲ. ಅಣ್ಣಂದಿರಿಗೆ ಶಾಲೆಗೆ ಸೇರಿಸಿ ಮಧ್ಯಾಮಿಕ ಶಿಕ್ಷಣದವರೆಗೆ ಶಾಲೆಗೆ ಕಳುಹಿಸಿದರು ಸಾಹೆರಾಳಿಗೂ ಶಾಲೆಗೆ ಸೇರಿಸಿದರು. ಆದರೆ ಇವಳೂ ಸಹ ಶಾಲೆಗೆ ಹೋಗಿ ಮನೆಗೆ ಬಂದ ಮೇಲೆ ಬೀಡಿ ಕಟ್ಟುತ್ತಿದ್ದಳು. ಹೀಗಾಗಿ ಓದಿನಲ್ಲಿ ಅಸಕ್ತಿ ಕಳೆದುಕೊಂಡಳು ಹೀಗಾಗಿ ಇವಳು ನಾಲ್ಕನೇ ತರಗತಿಯಲ್ಲಿಯೇ ಶಾಲೆ ಬಿಟ್ಟಳು ಮನೆಯಲ್ಲಿಯೇ ಬೀಡಿಕಟ್ಟುವ ಕೆಲಸದಲ್ಲಿ ನಿರತವಾದಳು.

ಇವಳಿಗೆ ಗಂಗಾವತಿಯಲ್ಲಿ ಒಬ್ಬ ಗ್ಯಾರೇಜ ಕೆಲಸ ಮಾಡುವವನಿಗೆ ಮದುವೆ ಮಾಡಿ ಕೊಟ್ಟರು. ಆರಂಭದಲ್ಲಿ ಸಾಹೆರಾಳು ಕೂಡಿಯೆ ಅತ್ತೆ ಮನೆಯಲ್ಲಿ ಇದ್ದಳು ನಂತರ ತಾವು ಪ್ರತ್ಯೇಕ ಮನೆ ಮಾಡಿಕೊಂಡು ಜೀವನ ನಡೆಸುತ್ತಿದ್ದರು. ಇವಳಿಗೆ ೩ ಜನ ಮಕ್ಕಳು ಇಬ್ಬರು ಗಂಡು ಮಕ್ಕಳು ಒಬ್ಬಳು ಹೆಣ್ಣು ಮಗಳು ಕೇವಲ ಒಬ್ಬನಿಗೆ ಶಿಕ್ಷಣ ಕೊಟ್ಟು ಇನ್ನೊಬ್ಬನು ಕೆಲಸಕ್ಕೆ ಹೋಗುತ್ತಿದ್ದನು ಮಗಳಿಗೆ ಶಾಲೆಗೆ ಸೇರಿಸಿದರೂ ಏಳನೇ ತರಗತಿಯಲ್ಲಿ ಇವಳಿಗೆ ಶಾಲೆಬಿಡಿಸಿದಳು. ಪ್ರಾಯಕ್ಕೆ ಬಂದ ಮಗಳಿಗೆ ಶಾಲೆಗೆ ಕಳಿಸಬಾರದು ಅಲ್ಲದೆ ಹೆಣ್ಣು ಮಕ್ಕಳು ಎಷ್ಟು ಓದಿದರೂ ಮತ್ತೆ ಅವರಿಗೆ ಅಡುಗೆ ಮನೆ ತಪ್ಪುದಿಲ್ಲ ಎಂದು ಅವಳಿಗೆ ಶಾಲೆ ಬಿಡಿಸಿದರು.

ಒಟ್ಟಿನಲ್ಲಿ ಇವರ ಸ್ಥಿತಿನೋಡಿದರೆ ತಾಯಿಯು ಶಿಕ್ಷಣ ಪಡೆಯಲಿಲ್ಲ ತನ್ನ ಮಗಳಿಗಾದರು ಒಳ್ಳೆಯ ಶಿಕ್ಷಣ ನೀಡಬೇಕೆಂದರೆ ಇವಳ ಗಂಡನು ಶಾಲೆ ಬಿಡಿಸಿದನು.

**ಗೌಸಿಯ ಗಂಡ ಬಾಷಾ ಸಾಬ**

ಗೌಸಿಯಳ ತಂದೆ ಮಹ್ಮದ ಅಲಿ ತಾಯಿ ಹುಸೇನಬೀ ಮಹ್ಮದಲಿಗೆ ಒಂಬತ್ತು ಜನ ಮಕ್ಕಳಲ್ಲಿ ಗೌಸಿಯುಳು ಒಬ್ಬಳಾಗಿದ್ದಳೆ. ಗೌಸಿಯಾಳ ತಂದೆಗೆ ಐದು ಜನ ಹೆಣ್ಣು ಮಕ್ಕಳು ಹುಟ್ಟಿದರು ತಂದೆಯು

ಕೂಲಿ ಕೆಲಸ ಮಾಡುತ್ತಿದ್ದನು. ಗೌಸಿಯಾಳು ಐದನೆಯ ಮಗಳು ಆಗಿದ್ದಳು. ಆದರೆ ತಂದೆಯ ದುಡಿಮೆ ಕಡಿಮೆ ಇರುವುದರಿಂದ ಐದು ಮಂದಿ ಹೆಣ್ಣು ಮಕ್ಕಳು ಆದ ಕಾರಣ ಅವರ ಶಿಕ್ಷಣದ ಬಗ್ಗೆ ಗಮನ ಕೊಡದೆ ಅವರನ್ನು ಮದುವೆಯ ಚಿಂತೆ ಮಾಡುತಿದ್ದ ಗಂಡು ಮಕ್ಕಳು ಒಬ್ಬರೂ ಆಗಿಲ್ಲ ಎಂದು ಮನೆ ಬಿಟ್ಟು ದೂರದ ಊರಿಗೆ ಹೋಗಿ ನೆಲೆಸಿದ. ಆದರೆ ತಾಯಿ ಒಬ್ಬಳ ಮೇಲೆ ಎಲ್ಲಾ ಮಕ್ಕಳ ಹೊಣೆಗಾರಿಕೆ ಬಿದ್ದಿತು ತಾಯಿ ಪಾತ್ರೆತೊಳೆದು ಆ ಮಕ್ಕಳನ್ನು ಜೋಪಾನ ಮಾಡುತ್ತಿದ್ದಳು ಹಿರಿಯ ಹೆಣ್ಣು ಮಕ್ಕಳು ಸಹ ಕೆಲಸಕ್ಕೆ ಹೋಗುತ್ತಿದ್ದರು ಇಂತಹ ಸಂದರ್ಬದಲ್ಲಿ ಆ ಮಕ್ಕಳ ಶಿಕ್ಷಣ ನೀಡುವುದು ತುಂಬ ದೂರ ತಂದೆ ಮನೆಬಿಟ್ಟು ಹೋದಾಗ ಗೌಸಿಯ ೨ನೇಯ ತರಗತಿ ಒದುತ್ತಿದ್ದಳು ಹೀಗಾಗಿ ಗೌಸಿಯ ಶಾಲೆ ಬಿಟ್ಟಳು.

ಎರಡು ಮೂರು ವರ್ಷಗಳ ಬಳಿಕ ತಂದೆ ಮನೆಗೆ ತೆರಳಿದ ನಾಲ್ಕು ಜನಗಂಡು ಮಕ್ಕಳಿಗೆ ಜನ್ಮಕೊಟ್ಟ ಆಗ ಗೌಸಿಯಳಿಗೆ ಒಬ್ಬ ಡ್ರೈವರಿಗೆ ಮದುವೆ ಮಾಡಿಕೊಟ್ಟು ಗೌಸಿಯಳಿಗೆ ಹದಿನಾರನೆಯ ವಯಸ್ಸಿನಲ್ಲಿಯೇ ಮದುವೆಮಾಡಿ ಕೊಟ್ಟರು ಗೌಸಿಯ ತಾಯಿಯ ಮನೆಯಲ್ಲಿಯೂ ದುಡಿದು ಗಂಡನ ಮನೆಯಲ್ಲಿಯು ಕಳೆಕೀಳುವಕೆಲಸದಲ್ಲಿ ನಿರತವಾಗಿದ್ದಳು ಇದೇರೀತಿ ಗೌಸೀಯ ಮನೆಯಲ್ಲಿ ಹೊರಗೂ ದುಡಿಯಬೇಕಾಗಿತ್ತು. ಮಾನಸಿಕವಾಗಿ ನೊಂದು ಗೌಸಿಯ ಅತ್ತೆ ಮಾವಂದಿರ ಜೊತೆ ಜಗಳವಾಡಿ ಪ್ರತ್ಯೇಕವಾಗಿ ನೆಲೆಸಲು ಪ್ರಾರಂಭಿಸಿದಳು ಗಂಡ ಡ್ರೈವರ ಕುಡುಕ ಏಳು ವರ್ಷವಾದರೂ ಹೆಂಡತಿ ಮಕ್ಕಳಿಗೆ ಜನ್ಮ ಕೊಟ್ಟಿಲ್ಲವೆಂದು ಬೇರೆ ಮದುವೆ ಮಾಡಿಕೊಳ್ಳಲು ನಿರ್ಧರಿಸಿದನು. ಆದರೆ ಗೌಸಿಯ ದೇವರಲ್ಲಿ ಅಪಾರ ಬೇಡಿ ಕೊಂಡಳು ಇವಳು ಬೇಡಿಕೊಂಡ ಪ್ರತಿಫಲವಾಗಿ ಒಂದು ಹೆಣ್ಣು ಒಂದು ಗಂಡು ಮಗನಿಗೆ ಜನ್ಮ ನೀಡಿದಳು. ಹೀಗಾಗಿ ಅವಳಗಂಡ ತನ್ನ ನಿರ್ಣಯವನ್ನು ಬದಲಾಯಿಸಿಕೊಂಡ ತಾನು ಶಿಕ್ಷಣ ಪಡೆಯದೇ ಇರುವುದರಿಂದ ತನ್ನ ಈ ಪರಿಸ್ಥಿತಿಗೆ ಕಾರಣ ಎಂದು ತಿಳಿದು ತನ್ನ ಮಗಳಿಗೆ ಒಳ್ಳೆಯಶಿಕ್ಷಣ ನೀಡಬೇಕೆನ್ನುವುದೇ ಗೌಸಿಯಳ ಆಸೆ. ಗೌಸಿಯಳ ಪರಿಸ್ಥಿತಿಯನ್ನು ಪರಿಗಣಿಸಿದರೆ ಪುರುಷ ಪ್ರಧಾನ ವ್ಯವಸ್ಥೇಯಲ್ಲಿರುವ ಪ್ರಪಂಚದಲ್ಲಿ ಹೆಣ್ಣು ವಿದ್ದರು ವ್ಯರ್ಥ ಹೆಣ್ಣಿನ ನಿರಾಕರಣೆ ಗಂಡಿನ ಆಪೇಕ್ಷೆ ಹೆಣ್ಣಿಗೆ ಶಿಕ್ಷಣ ಕೊಟ್ಟರು ವ್ಯರ್ಥ ಎಂದುನಂಬಿರುವುದು ಕಂಡು ಬರುತ್ತದೆ.

**ನೂರಜಹನ ಗಂಡ ಇಸ್ಮಾಯಿಲ್**

ನುರಜಾಹನಳ ತಂದೆ. ಖಾಜ ತಾಯಿ ಬಾನುಬೇಗಂ ನೂರಜಹನಳು ಹುಟ್ಟಿದ್ದು ಕಂಪ್ಲಿಯಲ್ಲಿ ಇವಳ ತಂದೆ. ಮತ್ತು ತಾಯಿ ಇಬ್ಬರು ಕೂಲಿಕೆಲಸ ಮಾಡುತ್ತಿದ್ದರು ಕೌಟುಂಬಿಕ ಜಗಳದಿಂದ ಗಂಡ ಹೆಂಡತಿ ಇಬ್ಬರು ಪ್ರತ್ಯೇಕವಾದರು ಬಾನುಬೇಗಂಳಿಗೆ ಒಬ್ಬ ಮಗಳಿದ್ದಳು ಮಗಳ ಪೋಷಣೆ ಶಿಕ್ಷಣ ಮತ್ತು ಮನೆಯ ಎಲ್ಲಾ ನಿರ್ವಾಹಣೆಯು ಬಾನುಬೇಗಂಳ ಮೇಲೆಯೇ ಬಿದ್ದಿತು ನೂರಜಹನಳು ಪ್ರತಿದಿನ ಸರಿಯಾಗಿ ಶಾಲೆಗೆ ಹೋಗುತ್ತಿರಲಿಲ್ಲ.

ತಂದೆ ಇಲ್ಲದೆ ತಾಯಿಯ ಸರಿಯಾದ ಪೋಷಣೆ ಇಲ್ಲದೆ ಬೆಳೆದ ನೂರಜಹನಳು ಚಿಕ್ಕವಯಸ್ಸಿನಲ್ಲಿಯೇ ಸಂಬಂಧಿ ಯೋಬ್ಬನನ್ನು ಪ್ರೀತಿಸಿ ಮದುವೆಯಾದ ಕಾರಣ ಶಾಲೆಬಿಡಬೇಕಾಯಿತು. ನೂರಜಹನಳು ಇನ್ನು ಆಟ ಪಾಠ ಓದು ಬರಹಕಲಿಯುವ ವಯಸ್ಸಿನಲ್ಲಿ ಕೌಟುಂಬಕ ಜವಬ್ದಾರಿಯು ಬಿದ್ದಿತು.

**ಆಶಾ ಬನಿ ಗಂಡ ನಬೀಸಾಬ**

ತಂದೆ ಕರೀಂಸಾಬ ತಾಯಿ ಫಾತಿಮಾಬೇಗಂ ಇವಳು ಮೂವತ್ತು ವರ್ಷದವಳು ಆಶಾ ಬನಿಗೆ ಒಬ್ಬಳು ಹಿರಿಯ ಅಕ್ಕ ಒಬ್ಬ ಅಣ್ಣನು ಇದ್ದನು ಇವಳ ತಂದೆ. ಗುಮಾಸ್ತನಾಗಿದ್ದನು ಆಶಳು ಬಡತನ ದಲ್ಲೆ ಬೆಳೆದಳು. ಇವಳ ಹಿರಿಯ ಅಕ್ಕಳಿಗೆ ಒಟ್ಟು ಶಾಲೆಗೆ ದಾಖಲು ಮಾಡಲೇ ಇಲ್ಲ ಹಿರಿಯಅಣ್ಣನು ಅಲ್ಲಸ್ವಲ್ಲಪ ವಿದ್ಯೆಯನ್ನು ಕಲಿತಿದ್ದನು ಆಶಾಬನಿ ಮಾತ್ರ ೫ನೇ ತರಗತಿಯವರೆಗೆ ಶಿಕ್ಷಣ ಪಡೆದು ಕೊಂಡಳು ಇವಳು ಶಿಕ್ಷಣ ಪಡೆದುಕೊಂಡಿದ್ದು ಕುಕನೂರಿನಲ್ಲಿ ಇವಳು ಕುಕುನೂರಿಗೆ ಶಾಲೆಗೆ ಹೋಗಬೇಕಾದರೆ ದೀನಾಲು ಬಸ್ಸಿಗೆ ಹೋಗ ಬೇಕಾಗಿತ್ತು. ಈ ಕಾರಣದಿಂದ ಊರಿಂದ ಊರಿಗೆ ಹೋಗಿ ಕಲಿಯುದು ತಪ್ಪು ಎಂದು ಇವಳಿಗೆ ಶಾಲೆಬಿಡಿಸಿದ್ದಾರೆ.

ಇಪ್ಪತ್ತನೇ ವಯಸ್ಸಿನಲ್ಲಿಯೇ ಕೂಲಿಕೆಲಸ ಮಾಡುವವನಿಗೆ ಮದುವೆ ಮಾಡಿಕೊಟ್ಟರು ಇವಳು ಮೂರು ಮಂದಿ ಮಕ್ಕಳಿಗೆ ಜನ್ಮಕೊಟ್ಟಳು ಆದರೆ ಗಂಡನೊಬ್ಬನ ಆದಾಯದಿಂದ ಜೀವನ ನಡೆಸಲು ಅಗುತ್ತಿರಲಿಲ್ಲ ಹೀಗಾಗಿ ಇವಳು ಸಹ ಕೂಲಿಕೆಲಸಕ್ಕೆ ಹೋಗು ತ್ತಿದ್ದಳು. ಮೂರು ಜನ ಮಕ್ಕಳಿಗೆ ಶಾಲೆಗೆ ಸೇರಿಸಿದ್ದರೂ ಅದರೆ ಆ ಮಕ್ಕಳ ಮೇಲೆ ಪಾಲಕರ ಪಾಲನೆ ಪೋಷಣೆ ಇಲ್ಲವಾಯಿತು. ಹೀಗಾಗಿ ಅವರು ಓದಿನಲ್ಲಿ ಆಸಕ್ತಿ ಕಳೆದುಕೊಂಡರು ಇಷ್ಟಿದ್ದರೂ ಕೇವಲ ಒಬ್ಬನು

೧೦ನೇಯ ತರಗತಿಯವರೆಗೆ ಶಿಕ್ಷನ ಪಡೆದುಕೊಂಡನು ಅವನಿಗೊಬ್ಬನಿಗಾದರೂ ಒಳ್ಳೆಯ ಶಿಕ್ಷಣ ಕೊಡುವುದು ಆಶಾಬನಿಯ ಆಸೆ ಅದೇರೀತಿ ಹೆಣ್ಣು ಮಗಳ ಶಿಕ್ಷಣದ ಬಗ್ಗೆ ಇವಳು ತಳೆದಿರುವ ಆಸೆ ಎಂದರೆ ಅವಳು ಓದಿನಲ್ಲಿ ಚುರುಕಿಲ್ಲ ಅವಳಿಗೆ ಶಿಕ್ಷಣಕೊಟ್ಟರು ವ್ಯರ್ಥ ಏಕೆಂದರೆ ಅವಳು ಮದುವೆ ಮಾಡಿಕೊಂಡ ನಂತರ ಅಡಿಗೆಮನೆ ಮತ್ತು ಪಾತ್ರೆ ತಪ್ಪಿದಲ್ಲ, ಹೀಗಾಗಿ ತನ್ನಮಗಳಿಗೆಏಳನೇ ತರತಿಯಲ್ಲೆ ಶಾಲೆ ಬಿಡಿಸಿದಳು.

ಒಟ್ಟಿನಲ್ಲಿ ಆಶಾನ ಆಭಿಪ್ರಾಯ ನೋಡಿದರೆ ಹೆಣ್ಣಾಗಿ ಪುರುಷನ ಅಭಿಪ್ರಾಯದಂತೆ ಹೆಣ್ಣು ಮಕ್ಕಳಿಗೆ ಶಿಕ್ಷಣ ಕೊಡುವುದು ವ್ಯರ್ಥ ಎಂದು ತಿಳಿದಿರುವುದು ಇವಳ ಅಭಿಪ್ರಾಯ ತಪ್ಪಾಗಿದೆ.

**ಅಪಸರ ತಂದೆ ಹುಸೇನ ಸಾಬ**

ಅಪಸರಾಳ ತಂದೆ ಹುಸೇನಸಾಬ ತಾಯಿ ಬೇಗಂ ಈಗ ಅಪಸರಳಿಗೆ ಇಪ್ಪತ್ತು ವಯಸ್ಸು ಇವಳು ಕೇವಲ ೫ನೇ ತರಗತಿಯವರೆಗೆ ಶಿಕ್ಷಣ ಪಡೆದುಕೊಂಡಳು ಇವಳ ತಂದೆಯು ಕೂಲಿ ಕೆಲಸ ಮಾಡುವನು ತಾಯಿಯು ಮನೆಯಲ್ಲಿ ಕೆಲವೊಂದು ಕೆಲಸ      ಕಾರ್ಯಗಳು ಮಾಡುವಳು .

ಅಪಸರಳ ಹಿರಿಯ ಅಕ್ಕಳಿಗೂ ಶಾಲೆಗೆ ಸೇರಿಸಲಿಲ್ಲ ಇವಳಿಗೆ ಶಾಲೆಗೆ ಸೇರಿಸದೇ ಇರಲು ಕಾರಣ ಇವಳಗಿಂತ ಇನ್ನೂ ಕಿರಿಯ ನಾಲ್ಕು ಮಕ್ಕಳನ್ನು ನೋಡಿಕೊಂಡು ಹೋಗುವ ಸಲುವಾಗಿ ಇವಳಿಗೆ ಶಿಕ್ಷಣವೇ ನೀಡಲಿಲ್ಲ ಕೇವಲ ಮದರಸಾದಲ್ಲಿ ಅರೆಬಿಕ್ ಶಿಕ್ಷನವನ್ನು ಮಾತ್ರ ಕೊಟ್ಟರು. ಹಿರಿಯ ಮಗಳಿಗೆ ಶಿಕ್ಷಣ ಕೊಡದೇ ಇರುವದರಿಂದ ತಮ್ಮ ಇನ್ನೊಬ್ಬ ಮಗಳಾದ ಅಪಸರಳಿಗೆ ಶಾಲೆಗೆ ಕಳಿಸಬೇಕಂದು ಸ್ವತ: ತಂದೆ ತಾಯಿಯರು ಆಸಕ್ತಿವಹಿಸಿ ಶಾಲೆಗೆ ಸೇರಿಸಿದರು.

ಅಪಸರಳ ಸ್ಥಿತಿಯನ್ನು ನೋಡಿದರೆ ಅವಳಿಗೆ ಓದಿನಲ್ಲಿ ಅಸಕ್ತಿ ಇರದಿರಲು ಕಾರಣ ಇವಳ ತಂದೆ ತಾಯಿಯರು ಅನಕ್ಷರಸ್ಥರು ಮತ್ತು ಮನೆಯಲ್ಲೂ ಸರಿಯಾದ ಶೈಕ್ಷಣಿಕ ವಾತಾವರಣ ಇಲ್ಲದಿರುವುದೇ ಪ್ರಮುಖ ಕಾರಣವಾಗಿದೆ ಎನ್ನಬಹುದು.

**ಹಸಿನಾ ತಂದೆ. ರಂಜಾನಸಾಬ**

ಹಸಿನಳ ತಂದೆ ರಂಜಾನಸಾಬ್ ತಾಯಿ ಹುಸೇನಬೀ ಇವಳಿಗೆ ಇಪ್ಪತ್ತೊಂದು ವಯಸ್ಸು ಹಸಿನಳು ತುಂಬಾ ಬಡತನ ಕುಡುಂಬದಲ್ಲಿ ಜನಿಸಿದಳು ಇವಳ ತಂದೆಗೆ ಮೂರು ಮಂದಿ ಹೆಣ್ಣು ಮಕ್ಕಳು ನಾಲ್ಕು ಜನ ಗಂಡುಮಕ್ಕಳು ಹಸಿನಳು ಕೊನೆಯಮಗಳು ಹಸಿನಳು ಇನ್ನೂ ಮೂರು ನಾಲ್ಕು

ವರ್ಷದವಳಿದ್ದಾಗಲೇ ಇವಳ ತಂದೆ ತೀರಿಕೊಂಡನು ತಾಯಿಯೇ ಕೂಲಿ ಕೆಲಸಮಾಡಿ ಮಕ್ಕಳಿಗೆ ಪಾಲನೆ ಪೋಷಣೆ ಮಾಡಿದಳು ಮೊದಲ ಇಬ್ಬರು ಮಕ್ಕಳಿಗೆ ಒಟ್ಟು ಶಾಲೆಗೆ ದಾಖಲೇ ಮಾಡಲಿಲ್ಲ ಗಂಡು ಮಕ್ಕಳಿಗೂ ಮೂರು ನಾಲ್ಕನೇಯ ತರಗತಿಯವರೆಗೆ ಮಾತ್ರ ಶಿಕ್ಷಣ ನೀಡಿ ತಾಯಿಯ ಜೊತೆಗೆ ಇತರ ಹೆಣ್ಣು ಮಕ್ಕಳು ಹೊಲಕ್ಕೆ ಹೊಗುತ್ತಿದ್ದರು.

ದಿನಕ್ಕೆ ಮೂರುಸಲ ಊಟಕ್ಕೆ ತೊಂದರೆ ಇದ್ದಸಂದರ್ಭದಲ್ಲಿ ಶಿಕ್ಷಣ ಕೊಡುವುದು ತುಂಬಾ ದೂರ ಹೀಗಾಗಿ ಹಸಿನಳಿಗೆ ೬ನೇಯ ತರಗತಿಯವರೆಗೆ ಮಾತ್ರ ಶಾಲೆಗೆ ಹೋಗಿ ಬಿಟ್ಟಳು. ಹಸಿನಳ ತಾಯಿ ಎಲ್ಲಾ ಮಕ್ಕಳಿಗೆ ಮದುವೆ ಮಾಡಿಸಿದಳು ಆದರೆ ಇನ್ನು ಹಸಿನಳಿಗೆ ಒಳ್ಳೆಯ ಸಂಬಂಧಗಳು ಕೂಡಿ ಬರುತ್ತಿಲ್ಲವೆಂದು ಇನ್ನೂ ಇವಳಿಗೆ ಮದುವೆ ಮಾಡಿಲಿಲ್ಲ.

ಹಸಿನಳ ಸ್ಥಿತಿಯನ್ನು ಗಮನಿಸಿದರೆ ತಂದೆ ಇಲ್ಲದ ಹಸಿನಳು ಇವಳ ತಾಯಿ ಕಷ್ಟಪಟ್ಟು ಜೀವನ ನಡೆಸುವದು ಮೆಚ್ಚಬಹುದು ಬಡತನದ ಕಾರಣದಿಂದ ಅವರ ಮಕ್ಕಳಿಗೆ ಶಿಕ್ಷಣ ಕೊಡಲು ಆಗಲಿಲ್ಲ.

**ತಾಹೇರಾ ಗಂಡ ಇಸ್ಮಾಯಿಲ್ ಸಾಬ**

ತಾಹೇರಾಳು ಇಪ್ಪತ್ತೈದು ವರ್ಷದವಳಿದ್ದಾಳೆ ಇವಳ ತಂದೆ ಪೀರ್ ಸಾಬ್ ತಾಯಿ ರಸೂಲ್‌ಬಿ ಇವಳು ಹುಟ್ಟಿದ್ದು ಹೊಸಪೇಟೆಯಲ್ಲಿ ತಾಹೇರಳು ಹಿರಿಯ ಮಗಳು ಆಗಿದ್ದಳು ಇವಳಿಗಿಂತ ಇನ್ನೂನಾಲ್ಕು ಜನ ಕಿರಿಯ ತಂಗಿಯರು ಸಹ ಮತ್ತು ಇಬ್ಬರು ತಮ್ಮರು ಇದ್ದರು. ತಾಯಿ ಮನೆಯಲ್ಲಿಯೇ ಇದ್ದರೂ ಸಹ ಎಲ್ಲಾ ಮಕ್ಕಳನ್ನು ನೋಡಿಕೊಳ್ಳಲು ಆಗುತ್ತಿರಲಿಲ್ಲ. ಹೀಗಾಗಿ ಆ ಸಣ್ಣ ಮಕ್ಕಳ ಪಾಲನೆ ಪೊಷಣೆ ಮಾಡುವ ಸಲುವಾಗಿ ತಾಹೆರಳಿಗೆ ಒಟ್ಟು ಶಾಲೆಗೆ ಸೇರಿಸಲೇ ಇಲ್ಲ ಕೇವಲ ಮದರಸಾದಲ್ಲಿ ಶಿಕ್ಷಣ ಕೊಡಿಸಿದರು ಧಾರ್ಮಿ ಶಿಕ್ಷಣವನ್ನು ಮಾತ್ರ ತಾಹೆರಳು ಪಡೆದುಕೊಂಡಳು.

ಹಿರಿಯ ಮಗಳಾದ ಕಾರಣ ಅವಳಿಗೆ ಓದಲು ಮನಸ್ಸಿದ್ದರು ಓದಲಾಗದೇ ಸಣ್ಣ ವಯಸ್ಸಿನಲ್ಲಿಯೇ ಡ್ರೈವರ್‌ಗೆ ಮದುವೆ ಮಾಡಿಕೊಟ್ಟರು. ಇವಳ ಗಂಡ ಕುಡುಕ ಅತ್ತೆ ಮನೆಯಲ್ಲಿ ತಾಹೆರಾ ಒಂದು ದಿನವಾದರು ಸುಖ ಪಡೆಯಲಿಲ್ಲ ಕುಡಿದುಬಂದು ದೀನಾಲು ಹೆಂಡತಿ ಮತ್ತು ಮಗಳನ್ನು ಹೊಡೆಯುತ್ತಿದ್ದನು. ಮನೆಗೆ ಸರಿಯಾಗಿ ಹಣವನ್ನು ಕೊಡುತ್ತಿರಲಿಲ್ಲ. ತಾಹೆರಳಿಗೆ ಒಬ್ಬ ಹೆಣ್ಣುಮಗಳಿದ್ದಳು ಹೀಗಾಗಿ ತಾಯಿ ಮಗಳ ಜೀವನ ತುಂಬಾ ಶೋಚನಿಯವಾಗಿತ್ತು ಹೀಗಾಗಿ

ತಾಹೇರಳು ಪಾತ್ರೆತೊಳೆಯಲು ಬೇರೆ ಮನೆಗೆ ಕೆಲಸಮಾಡಲು ಹೊಗುತ್ತಿದ್ದಳು ಅಷ್ಟಾದರೂ ತನ್ನ ಮಗಳಿಗೆ ಶಾಲೆಗೆ ಸೇರಿಸಿದ್ದಳು ಒಂದು ದಿನ ತಾಹೆರಳನ ಗಂಡ ತೀರಿಕೊಂಡನು. ಆಗ ಮನೆಯ ಎಲ್ಲಾ ಜವಬ್ದಾರಿ ಮತ್ತು ಅವಳ ಪಾಲನೆ ಪೋಷಣೆ ಮತ್ತು ಶಿಕ್ಷಣ ಕೊಡಿಸುವ ಜವಬ್ದಾರಿ ತಾಹೆರಳ ಮೇಲೆಯೇ ಬಿದ್ದಿತು. ತಾಹೆರಳ ಆಸೆ ತನ್ನ ಮಗಳಿಗೆ ಒಳ್ಳೆಯ ಶಿಕ್ಷಣ ಕೊಡಿಸಬೇಕು ಎನ್ನುವುದೇ ಆಗಿತ್ತು. ತಾನು ಕಷ್ಟಪಟ್ಟಂತೆ ತನ್ನ ಮಗಳು ಕಷ್ಟ ಪಡಬಾರದು ಎನ್ನುವುದು ಇವಳ ಆಸೆಯಾಗಿದೆ.

ಒಟ್ಟಿನಲ್ಲಿ ತಾಹೇರಳು ತನ್ನ ತಂದೆ ತಾಯಿಯ ಮನೆಯಲ್ಲಿ ಹಿರಿಯಮಗಳಾದ ಕಾರಣ ಮನೆಯ ಎಲ್ಲಾ ಜವಬ್ದಾರಿ ಇವಳ ಮೇಲೆ ಬಿದ್ದಿತ್ತು ಅದೇರೀತಿ ತನ್ನ ಗಂಡನ ಮನೆಯಲ್ಲೂ ತಾಹೆರಳು ತುಂಬ ಕಷ್ಟಪಟ್ಟಳು ಇಷ್ಟಾದರೂ ತನ್ನ ಮಗಳಿಗೆ ಶಿಕ್ಷಣ ಕೊಟ್ಟಿರುವುದು ತಾಹೆರಳನ ಧೈರ್ಯ ಮೆಚ್ಚಬಹುದು.

೭

## ಮುಸ್ಲಿಂ ಸಮುದಾಯ: ಮಹಿಳೆ: ಶಿಕ್ಷಣ: ಸರಕಾರಿ ಯೋಜನೆಗಳು

ಭಾರತದಲ್ಲಿ ಮುಸ್ಲಿಮರು ಶೈಕ್ಷಣಿಕ ವಾಗಿ ಹಿಂದುಳಿಯಲು ಹಲವಾರು ಕಾರಣಗಳಿದ್ದು ಅವುಗಳು ಇಂತಿವೆ. ಭೀಕರ ಬಡತನ, ಶಿಕ್ಷಣದ ಪ್ರಾಮುಖ್ಯತೆಯ ಅಜ್ಞಾನ, ಶಿಕ್ಷಣ ಮತ್ತು ಉದ್ಯೋಗವಕಾಶಗಳ ಬಗೆಗೆ ಸಮೂಹದಲ್ಲಿ ತಿಳುವಳಿಕೆ ಹುಟ್ಟಿಸದಿರುವುದು, ಶಿಕ್ಷಣ ಒಂದು ದುಬಾರಿ ವೆಚ್ಚದ್ದು ಎಂದು ತಪ್ಪು ತಿಳುವಳಿಕೆ ಹಾಗೂ ಶಿಕ್ಷಣ ಪ್ರಚೋದನೆ ಮತ್ತು ಪ್ರೋತ್ಸಾಹ ಇಲ್ಲದಿರುವುದು ಹೀಗಾಗಿ ಮುಸ್ಲಿಮರ ಶೈಕ್ಷಣಿಕ ಮಟ್ಟ ಸುಧಾರಿಸಲು ಸರ್ಕಾರದ ಕರ್ತವ್ಯವೇನು ಮುಸ್ಲಿಮ ಸಂಘಟನೆಗಳು ಯಾವ ಪಾತ್ರ ವಹಿಸಬೇಕು ಯಾವ ಯಾವ ಕಾರ್ಯಕ್ರಮಗಳನ್ನು ಜಾರಿಗೆತರಬೇಕು ಎಂಬುದನ್ನು ಅಧ್ಯಯನ ಮಾಡುವುದು ಅವಶ್ಯಕ ವಾಗಿದೆ.(ಮಹಮ್ಮದ್ ಕುಳಾಯಿ, ಶಫುದ್ದೀನ್ ಬಿ.ಎನ್ , ಅಕ್ಬರ್ ಅಲಿ, ೨೦೦೦, ಪು.ಸಂ. ೫೪-೫೫).

ಸಮುದಾಯದ ಪ್ರತಿಯೊಬ್ಬ ಮುಸ್ಲಿಮನು ಸುಶಿಕ್ಷಿತವಾಗಬೇಕು ಸ್ತ್ರೀಯ ವಿದ್ಯಾಭ್ಯಾಸ ಇಂದು ಅನಿವಾರ್ಯದ ಅಂಶವಾಗಿದ್ದು ಸ್ತ್ರೀ ಶಿಕ್ಷಣದ ಕುರಿತಾದ ಎರಡನೆ ದರ್ಜೆಯ ನೋಟ ಮುಸ್ಲಿಮ ಸಮುದಾಯದಿಂದ ಮಾಯ ವಾಗ ಬೇಕು, ಒಬ್ಬ ಸ್ತ್ರೀಯು ಸುಶಿಕ್ಷಿತವಾದರೆ ಒಂದು ಸಮುದಾಯವೇ ಸುಶಿಕ್ಷಿತವಾದಂತೆ ಎಂಬ ಮಾತಿನ ಮಹತ್ವವನ್ನು ಮುಸ್ಲಿಮ ಸಮುದಾಯ ಕೂಡಲೇ ಅರಿಯ ಬೇಕಾಗಿ ರುವ ಅನಿವಾರ್ಯತೆಯಿಂದೆ. (ಮಹಮ್ಮದ್ ಕುಳಾಯಿ, ಶಫುದ್ದೀನ್ ಬಿ.ಎನ್ , ಅಕ್ಬರ್ ಅಲಿ, ೨೦೦೦, ಪು.ಸಂ. ೯೬-೯೭).

ಮಾನವ ಜೀವನದ ಆರಂಭದಲ್ಲಿ ಸ್ತ್ರೀ ಪುರುಷರಿಬ್ಬರೂ ಜ್ಞಾನವನ್ನು ಸೃಷ್ಟಿಮಾಡಿದರೆಂದು ಐತಿಹಾಸಿಕ ಸಂಶೋಧನೆ ಮತ್ತು ಅಧ್ಯಯನಗಳು ತಿಳಿಸುತ್ತದೆ. ಸ್ತ್ರೀಯರು ವ್ಯವಸಾಯ ಕಂಡು ಹಿಡಿದರೆಂದು ಕೆಲವು ಕರಕುಶಲತೆಗಳನ್ನು ಪ್ರಾರಂಭಿಸಿದರೆಂದು ಸ್ತ್ರೀಯರು ಮೊದಲು ವೈದ್ಯರೆಂದು ಔಷಧಿಗಳನ್ನು ಅಭಿವೃದ್ದಿ ಪಡಿಸಿದರೆಂದು ಕಂಡುಕೊಳ್ಳಲಾಗಿದೆ. ಆದರೆ ಇಂದು ಮಾನವ ಇತಿಹಾಸ ಮಾನವ ಪದಗಳನ್ನು ಬಳಸುವಾಗ ಇತಿಹಾಸದ ದೃಷ್ಟಿಯಿಂದ ಸ್ತ್ರೀಯರನ್ನು ದೂರವೇ ಇಡಲಾಗಿದೆ.

## ಹೆಣ್ಣು ಮಕ್ಕಳ ಶಿಕ್ಷಣದ ಅವಶ್ಯಕತೆ.

ಹೆಣ್ಣು ಮಕ್ಕಳಿಗೆ ಶಿಕ್ಷಣದ ಅವಕಾಶ ಖಚಿತ ಪಡಿಸುವುದು ಗುಣಮಟ್ಟ ಉತ್ತಮ ಪಡಿಸುವುದು ಮತ್ತು ಅವರೆ ಸಕ್ರಿಯ ಸಹಭಾಗಿತ್ವದ ಮಾರ್ಗದಲ್ಲಿ ಬರುವ ಪ್ರತಿ ಅಡ್ಡಿಯನ್ನು ನಿವಾರಿಸುವುದು ಅತಿ ತುರ್ತು ಮಹತ್ವದಾಗಿದೆ. ಎಂದು 'ಎಲ್ಲರಿಗೆ ಶಿಕ್ಷಣ' ಕುರಿತ ವಿಶ್ವ ಸಮ್ಮೇಳನ ತನ್ನ ೩ ನೇಯ ಅನುಚ್ಛೇದದಲ್ಲಿ ಹೇಳಿದೆ.

ಪ್ರಾಚೀನ ಗ್ರಂಥಗಳು ಆಧುನಿಕ ಚಿಂತಕರು ಮತ್ತು ಮಹಿಳಾ ವಿಮೋಚನಾ ಕಾರ್ಯ ಕರ್ತರೆಲ್ಲರೂ ಹೆಣ್ಣು ಮಕ್ಕಳ ಮತ್ತು ಸ್ತ್ರೀಯರ ಶಿಕ್ಷಣದ ಅವಶ್ಯಕತೆಗೆ ಸಾಕಷ್ಟು ಕಾರಣಗಳನ್ನು ಒದಗಿಸಿದ್ದಾರೆ. ಹೆಣ್ಣು ಮಕ್ಕಳ ಶಿಕ್ಷಣವು ಒಂದು ಸಮಾಜಿಕ ಜವಾಬ್ದಾರಿಯೂ ಮಾನವ ಹಕ್ಕುಗಳ ಒಂದು ವಿಷಯವೂ ಆಗಿದೆ.

೧. ೧೯೯೦ ರಿಂದಲೂ ಮಾನವ ಅಭಿವೃದ್ಧಿಗೆ ಶಿಕ್ಷಣದ ಮಹತ್ವ ಕುರಿತು ಸಾಮಾನ್ಯವಾದ ಅಣಗೀಕಾರ ವಿದೆ ಜೊತೆಗೆ ಇದರಲ್ಲಿ ಹೆಣ್ಣು ಮಕ್ಕಳ ಶಿಕ್ಷಣದ ಪ್ರಮುಖ ಪಾತ್ರವೂ ತಿಳಿದಿದೆ. ೧೯೮೯ ರಲ್ಲಿ ರೂಪಗೊಂಡ ಮಕ್ಕಳ ಹಕ್ಕುಗಳ ಸಮಾವೇಶವು ಎಲ್ಲಾ ಹೆಣ್ಣು ಹಾಗೂ ಗಂಡು ಮಕ್ಕಳಿಗೆ ಉತ್ತಮ ಗುಣಮಟ್ಟದ ಶಿಕ್ಷಣದ ಹಕ್ಕನ್ನು ಬೇಡಿತು ಮಾನವ ಹಕ್ಕುಗಳ ದೃಷ್ಟಿಯಿಂದ ಹೆಣ್ಣು ಮಕ್ಕಳ ಶಿಕ್ಷಣವು ಆದ್ಯತೆ ಗಳಿಸಬೇಕು. ಏಕೆಂದರೆ ಇಂದಿಗೂ ಪ್ರಾಥಮಿಕ ಶಿಕ್ಷಣದಿಂದ ಹೊರಗಿರುವ ಮಕ್ಕಳಲ್ಲಿ ಸುಮಾರು ೨/೩ ರಷ್ಟು ಹೆಣ್ಣು ಮಕ್ಕಳೆ ಇದ್ದಾರೆ.

೨. ಜೋಮಟೇಯನ್ ಸಮ್ಮೇಳನದಲ್ಲಿ ಸೇರಿದ್ದ ೧೧೫ ದೇಶಗಳ ೧೫೦೦ ಪ್ರತಿನಿಧಿಗಳೂ ೨೦ ಅಂತರ ಸರ್ಕಾರ ಸಂಸ್ಥೆಗಳು ೧೪೦ ಸರ್ಕಾರೇತರ ಸಂಸ್ಥೆಗಳು ಎಲ್ಲರಿಗೂ ಅದರಲ್ಲಿಯೂ ವಿಶೇಷವಾಗಿ ಹೆಣ್ಣುಮಕ್ಕಳಿಗೆ ಶಿಕ್ಷಣ ನೀಡುವ ಗುರಿ ಸಾಧಿಸಲು ಹೊಸದಾಗಿ ಕಾರ್ಯ ಪ್ರಾರಂಭಿಸುವ ಮತ್ತು ಹೊಸ ಬಧ್ಧತೆಯನ್ನು ವ್ಯಕ್ತ ಪಡಿಸಲೇಬೇಕಾದ ಅಗತ್ಯವನ್ನೆ ಪ್ರಮುಖ ವಿಷಯವನ್ನಾಗಿ ಪರಿಗಣಿಸಿವೆ.

೩. ಹೆಣ್ಣು ಮಕ್ಕಳಿಗೆ ಶಿಕ್ಷಣದ ಮಹತ್ವ ಏಕೆಂದರೆ ಅವರು ಬೆಳೆದು ಸ್ತ್ರೀಯರಾದಾಗ ಸಮುದಾಯದಲ್ಲಿ ರಾಜಕೀಯ ಮತ್ತು ಆರ್ಥಿಕ ನಿರ್ಧಾರಗಳನ್ನು ಕೈಗೊಳ್ಳುವ ಕ್ರಿಯೆಯಲ್ಲಿ ಭಾಗವಹಿಸುವ ಹಕ್ಕನ್ನು ಚಲಾಯಿಸಲು ಸಮರ್ಥರಾಗುವರು ಒಬ್ಬ ಸುರಕ್ಷಿತ ಮಹಿಳೆಯು ಹೆಚ್ಚು ಸ್ವತಂತ್ರವಾದ ವೈಯಕ್ತಿಕವಾದ ರಾಜಕೀಯ ಮತ್ತು ಆರ್ಥಿಕ ನಿರ್ಧಾರಗಳನ್ನು ಮಾಡುವಳು ಜೊತೆಗೆ

ಶಿಕ್ಷಣ ಪಡೆದ ಮಹಿಳೆಯರು ಉತ್ತಮ ಶಿಶುಪೋಷಣೆ ಮೂಲಕ ಮಕ್ಕಳ ಸಂಖ್ಯೆಯನ್ನು ಕಡಿಮೆ ಮಾಡುವರು.

೪. ಗಂಡುಮಕ್ಕಳಿಗಿಂತ ಕಡಿಮೆ ಸಂಖ್ಯೆಯ ಬಾಲಕಿಯರು ಶಾಲೆಗೆ ದಾಖಲಾಗುತ್ತಾರೆ. ಬಾಲಕರಿಗಿಂತ ಕಡಿಮೆ ಸಂಖ್ಯೆಯ ಬಾಲಕಿಯರೇ ಪ್ರಾಥಮಿಕ ಶಿಕ್ಷಣ ಮುಗಿಸುತ್ತಾರೆ. ಅನೇಕ ಪ್ರದೇಶಗಳಲ್ಲಿ ಪ್ರಾಥಮಿಕ ಶಾಲೆಗಳಲ್ಲಿ ಮುಂದುವರೆಯುವ ಲಿಂಗಾಧರಿತ ಅಂತರವು ಪ್ರೌಢಶಾಲೆಗಳಲ್ಲಿ ಸಾಗುವ ಹಂತದಲ್ಲಿ ಇನ್ನೂ ಹೆಚ್ಚಾಗಿದೆ. ಶಿಕ್ಷಣವಿಲ್ಲದ ಅಥವಾ ಕಡಿಮೆ ಶಿಕ್ಷಣ ಪಡೆದ ಹುಡುಗಿಯರು ತಮ್ಮ ಜೀವನವನ್ನು ಸುಧಾರಿಸಿಕೊಳ್ಳುವ ಅವಕಾಶದಿಂದ ವಂಚಿತರಾಗುತ್ತಾರೆ. (ಡಾ. ಶಶಿಕಲಾ.ಎ, ಡಾ. ರಾಧಾಮಣಿ, ಡಾ. ಸುನಿತಾ .ಸಿ.ಎನ್., ಪು.ಸಂ.೫೪-೫೫).

೫. ಶಿಕ್ಷಣ ಪಡೆದ ಹೆಣ್ಣು ಮಕ್ಕಳು ಹೆಚ್ಚು ಪರಿಣಾಮಕಾರಿ ಮಾತೆಯರಾಗಿ ಅವರ ಮಕ್ಕಳು ಉತ್ತಮ ಪೋಷಣೆ ಹಾಗೂ ಆರೋಗ್ಯದ ಅಭ್ಯಾಸಗಳಿರುವುದರಿಂದ ಹೆಚ್ಚುಕಾಲ ಬದುಕುಳಿವರೆಂಬುದನ್ನು ಹಲವು ದಶಕಗಳ ಸಂಶೋಧನೆ ತೋರಿಸಿಕೊಟ್ಟಿದೆ. ಸುರಕ್ಷಿತ ಮಹಿಳೆಯರು ಔಪಚಾರಿಕ ಕಾರ್ಮಿಕ ಮಾರುಕಟ್ಟೆ ಪ್ರವೇಶಿಸುವ ಹೆಚ್ಚಿನ ವೇತನ ಪಡೆಯುವ ಹಾಗೂ ಆ ಮೂಲಕ ರಾಷ್ಟ್ರದ ಆರ್ಥಿಕ ಉತ್ಪಾದಕತೆಗೆ ಕೊಡುಗೆ ನೀಡುವ ಸಾಧ್ಯತೆ ಹೆಚ್ಚಾಗಿದೆ. ಸುರಕ್ಷಿತ ಮಹಿಳೆಯರ ಮಕ್ಕಳು ಸುಶಿಕ್ಷಿತರಾಗುವ ಸಂಭವವೂ ಹೆಚ್ಚಾಗಿದ್ದು ಮುಂದಿನ ಪೀಳಿಗೆಗೆ ಅದರ ಲಾಭವನ್ನು ವರ್ಗಾಯಿಸುವ ಸಂಭವವೂ ಹೆಚ್ಚಾಗಿದೆ. ಮಾನವ ಅಭಿವೃದ್ಧಿಯಲ್ಲಿ ಒಂದು ದೇಶದ ಸಫಲ ಕಾರ್ಯಾಚರಣೆಗೆ ಕಾರಣವಾದ ಮುಖ್ಯ ಅಂಶಗಳನ್ನು ಗುರ್ತಿಸುವ ಉದ್ದೇಶದಿಂದ ಕೈಗೊಂಡ ಇತ್ತೀಚಿನ ಪುನರ್ಪರಿಶೀಲನೆ ಹಾಗೂ ವಿಶ್ಲೇಶಣೆಯು ಹೆಚ್ಚಿನ ಪ್ರಮಾಣದಲ್ಲಿ ಹೆಣ್ಣು ಮಕ್ಕಳ ಶಾಲಾ ದಾಖಲಾತಿಯು ಒಂದು ಅವಶ್ಯಕ ಅಂಶವಾಗಿದೆ.

೬. ಶಿಕ್ಷಣವು ಹೆಣ್ಣು ಮಕ್ಕಳ ಜೀವನವನ್ನು ವರ್ತಮಾನ ಹಾಗು ಭವಿಷ್ಯಗಳೆರಡರಲ್ಲೂ ಉತ್ತಮಗೊಳಿಸಲು ಸಹಾಯವಾಗಿದೆ. ಶಿಕ್ಷಣವು ಕೇವಲ ಉದ್ಯೋಗ ಒದಗಿಸುವುದು ಮಾತ್ರವಲ್ಲದೆ ಅವರ ಜೀವನದ ಸ್ಥಿತಿ ಹಾಗೂ ಸನ್ನಿವೇಶಗಳನ್ನು ಸುಧಾರಿಸಿದೆ. ಶಿಕ್ಷಣವು ಹೆಣ್ಣು ಮಕ್ಕಳಿಗೆ ಮಹಿಳೆಯರಿಗೆ ಇತರರೊಂದಿಗೆ ಸಂಭಂದವನ್ನು ಉತ್ತಮ ಪಡಿಸಿಕೊಳ್ಳಲು ತಮ್ಮನ್ನು

ಸಂರಕ್ಷಿಸಿಕೊಳ್ಳಲು ಮತ್ತು ವಿವಾಹ ಜೀವನ ಸಫಲವಾಗಿಸಿಕೊಳ್ಳಲು ಮತ್ತು ತಮ್ಮ ಮಕ್ಕಳನ್ನು ಸಮರ್ಥರನ್ನಾಗಿಸಿಕೊಳ್ಳಲು ಶಿಕ್ಷಣ ಮಹಿಳೆಯರಿಗೆ ಅವಶ್ಯವಾಗಿದೆ.

೭. ಹೆಣ್ಣು ಮಕ್ಕಳು ಶಿಕ್ಷಣ ಪಡೆದುಕೊಳ್ಳುವುದರಿಂದ ಸ್ವತ: ಹೆಣ್ಣು ಮಕ್ಕಳಿಗೂ ಅವರ ಸಧ್ಯದ ಹಾಗೂ ಮುಂದಿನ ಸಮಾಜಕ್ಕೂ, ದೇಶಕ್ಕೂ ಹಲವಾರು ಲಾಭಗಳಿವೆ.

೮. ಸುಶಿಕ್ಷಿತ ಮಹಿಳೆಯೊಬ್ಬಳು, ತಾನು ಉತ್ತಮ ತಾಯಿ ಕೆಲಸಗಾರ್ತಿ ಮತ್ತು ನಾಗರೀಕಳಾಗಲು ಅಗತ್ಯವಾದ ಎಲ್ಲಾ ಕೌಶಲ್ಯಗಳು ಮಾಹಿತಿ ಮತ್ತು ಆತ್ಮ-ವಿಶ್ವಾಸವನ್ನು ಹೊಂದಿರುತ್ತಾಳೆ. .(ಡಾ. ಶಶಿಕಲಾ.ಎ, ಡಾ. ರಾಧಾಮಣಿ, ಡಾ. ಸುನಿತಾ .ಸಿ.ಎನ್., ಪು.ಸಂ.೫೬).

## ಸರ್ಕಾರದ ಪ್ರೋತ್ಸಾಹಗಳು ಮತ್ತು ಕ್ರಮಗಳು

ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣದಲ್ಲಿ ಲಿಂಗ ಅಸಮಾನತೆಗಳನ್ನು ನಿವಾರಿಸುವುದರಿಂದ ಆಗುವ ಪ್ರಗತಿಯು ನಿಜವಾದ ಪ್ರಭಾವದಿಂದ ಉಂಟಾಗುವ ದೇಶಗಳಲ್ಲಿ ಯುನಿಸೆಫ್‌ನ ಕಾರ್ಯಾಕಾರಿ ನಿರ್ದೇಶಕರಾದ ಕೆರೋಲ್ ಬೆಲ್ಲ ಮಿಯವರು ಪ್ರಚಾರಕರ್ಯ ಕ್ರಮವನ್ನು ರೂಪಿಸಿದ್ದಾರೆ. ೨೦೦೫ ರ ವೇಳೆಗೆ ಲಿಂಗ ಸಮಾನತೆಯ ಗುರಿಸಾಧನೆಗಾಗಿ ಯುನಿಸೆಫ್ ಗುರುತಿಸಿರುವ ಭಾರತ ಸೇರಿದಂತೆ ೨೫ದೇಶಗಳಿಗೆ ಯಾವ ಸಹಾಯಬೇಕಾದರೂ ಒದಗಿಸಲು ಸಿಧ್ಧವಿರುವದಾಗಿ ಅವರು ಹೇಳಿದ್ದಾರೆ.

ವಿಶ್ವಸಂಸ್ಥೆಯ ಎಲ್ಲಾ ಸದಸ್ಯ ರಾಷ್ಟ್ರಗಳೂ ಒಪ್ಪಿಕೊಂಡಿರುವ 'ಮಿಲೆನಿಯಂ ಅಭಿವೃದ್ಧಿ ಗುರಿಗಳು' ೨೦೦೫ರ ವರ್ಷವನ್ನು ಮೊದಲು ಮೈಲುಗಲ್ಲಾಗಿ ತಿರ್ಮಾನಿಸಿ ಆ ವರ್ಷದ ಕೊನೆಯ ವೇಳೆಗೆ ಪ್ರಾಥಮಿಕ ಹಾಗು ಪ್ರೌಢಶಿಕ್ಷಣಗಳಲ್ಲಿ ಲಿಂಗ ಅಸಮಾನತೆಯನ್ನು ಕೊನೆಗೊಳಿಸಲು ತಿರ್ಮಾನಿಸಿ ಗುರ್ತಿಸಿಕೊಂಡಿರುವ ೨೫ ದೇಶಗಳಲ್ಲಿ ಶಾಲೆದಾಖಲಾಗದಿರುವ ಶಾಲೆಗೆ ಹೋಗದಿರುವ ಹೆಣ್ಣುಮಕ್ಕಳನ್ನು ಗುರ್ತಿಸಲು ರಾಷ್ಟ್ರಸರ್ಕಾರಗಳು ಹಾಗು ಇತರ ಸಹಯೋಗಿಗಳೊಂದಿಗೆ ಯುನಿಸೆಫ್ ಕೆಲಸ ಮಾಡುತ್ತಿದೆ. ಪ್ರತಿ ದೇಶದಲ್ಲಿ ಸಂಪನ್ಮೂಲಗಳನ್ನು ಸಂಘಟಿಸಲು ಹೆಣ್ಣು ಮಕ್ಕಳನ್ನು ಶಾಲೆಗೆ ಕಳುಹಿಸುವ ಅಗತ್ಯ ಕುರಿತು ವಿಶಾಲವಾದ ರಾಷ್ಟ್ರೀಯ ಒಮ್ಮತವನ್ನು ನಿರ್ಮಿಸಲು ಹಾಗು ಶಾಲೆಗಳನ್ನು ಉತ್ತಮಗೊಳಿಸಿ ಹೆಣ್ಣು ಮಕ್ಕಳು ಶಾಲೆಗೆ ಆಕರ್ಷಿತರಾಗುವಂತೆ ಮಾಡಲು ಯುನಿಸೆಫ್ ಸರ್ಕಾರಗಳೊಡನೆ ಕೆಲಸ ಮಾಡುತ್ತದೆ. ಸರ್ಕಾರವು ಸ್ವತಂತ್ರ ಪೂರ್ವ ಹಾಗೂ ನಂತರವು ನೆಮಿಸಿರುವ ಹಲವು ಆಯೊಗಗಳ ಉದ್ದೇಶ ಹೆಣ್ಣು ಮಕ್ಕಳ ಶಿಕ್ಷಣದ ಸ್ಥಿತಿಯನ್ನು ಅಧ್ಯಯನಮಾಡಿ ಈ ಕುರಿತು

ಶಿಫಾರಸ್ಸುಗಳನ್ನು ಮಂಡಿಸುವುದು ಆಗಿದೆ. ಈ ಆಯೋಗವು ಮಾಡಿರುವ ಶಿಫಾರಸ್ಸುಗಳು ಹೀಗಿವೆ. (ಡಾ. ಶಶಿಕಲಾ.ಎ, ಡಾ. ರಾಧಾಮಣಿ, ಡಾ. ಸುನಿತಾ .ಸಿ.ಎನ್., ಪು.ಸಂ.೫೮).

## ಬ್ರಿಟೀಷರ ಕಾಲದ ಮಹಿಳಾ ಶಿಕ್ಷಣ ಪ್ರಗತಿಯ ವರದಿಗಳು

### ಉಡ್ಸ್‌ನ ವರದಿಯ ಶಿಫಾರಸ್ಸು

ಮಹಿಳಾ ಶಿಕ್ಷಣ ಕೊಡದೇ ಹೊರತು ಭಾರತದೇಶಕ್ಕೆ ಬೆಲೆ ಬರುವುದಿಲ್ಲ. ಆದ್ದರಿಂದ ಅವರಿಗೆ ಸಹಾನುಭೂತಿ ತೋರಿಸಿ ಅವರಿಗೆ ಶಿಕ್ಷಣ ಪಡೆಯುವ ಸಕಲ ಸೌಲಭ್ಯಗಳನ್ನು ಒದಗಿಸ ಬೇಕೆಂದು ಹೇಳಿತು. ಮುಸ್ಲಿಂರ ಶಿಕ್ಷಣ ಅಭಿವೃದ್ಧಿ ಪಡಿಸಬೇಕೆಂದು ಉಡ್ಸನು ಗಮನ ಮಾಡಿದನು. ಮುಸ್ಲಿಂ ಜನಾಂಗ ಶಿಕ್ಷಣದಲ್ಲಿ ಹಿಂದುಳಿದದರಿಂದ ಅವರ ಸಾಮರ್ಥ್ಯ ಬೆಳೆಸಿ ಕೊಳ್ಳುವಂತೆ ಶಿಫಾರಸ್ಸು ಮಾಡಿತು.(ಓಬಳೇಶ್ ಘಟ್ಟಿ, ೧೯೯೨, ಪು.ಸಂ. ೬೩)

### ಹಂಟರ ಆಯೋಗ

ಅಂದಿನ ಮಹಿಳಾ ಶಿಕ್ಷಣದ ಬಗ್ಗೆ ಬಹಳ ಖೇದವನ್ನು ವ್ಯಕ್ತಪಡಿಸುತ್ತಾ ಮಹಿಳಾ ಶಿಕ್ಷಣದ ಪರಿಪೂರ್ಣ ಅಭಿವೃದ್ಧಿಗೆ ಕೆಳಗಿನ ಅಂಶಗಳನ್ನು ತಿಳಿಸುತ್ತಾ ಶಿಫಾರಸ್ಸನ್ನು ಮಾಡಿದೆ.

೧. ಸಾರ್ವಜನಿಕ ನಿಧಿಯ ವ್ಯವಸ್ಥೆ ಮಾಡುವದು

೨. ಸಾರ್ವಜನಿಕ ಸಹಕಾರ

೩. ಮುಕ್ಕಟೆ ಶಿಕ್ಷಣ ನೀಡುವುದು

೪. ಮಹಿಳಾ ಶಿಕ್ಷಕರನ್ನು ನೇಮಿಸುವದು

೫. ಪರದಾ ಪದ್ಧತಿ ಇರುವ ಮಹಿಳೆಯರಿಗೆ ಪ್ರತ್ಯೇಕ ಶಿಕ್ಷಣದ ವ್ಯವಸ್ಥೆ ಮಾಡುವುದು

೬. ಉತ್ತಮವಾದ ವಿಧ್ಯಾರ್ಥಿನಿಲಯವನ್ನು ಸ್ಥಾಪಿಸುವುದು.

ಬಾಲಕೀಯರಿಗೆ ಪ್ರತ್ಯೇಕ ವಿದ್ಯಾರ್ಥಿನಿಲಯುವನ್ನು ಸ್ಥಾಪಿಸುವುದು. (ಓಬಳೇಶ್ ಘಟ್ಟಿ, ೧೯೯೨, ಪು.ಸಂ. ೬೭). ಅದೇ ರೀತಿ ಮುಸ್ಲಿಮರ ಬಗ್ಗೆ ಈ ಆಯೋಗವು ಈ ಕೆಳಕಂಡ ಅಂಶಗಳನ್ನು ಶಿಫಾರಸ್ಸು ಮಾಡುತ್ತದೆ. ಮುಸ್ಲಿಂ ಜನಾಂಗ ಹೆಚ್ಚಿರುವ ಕೆಲವು ಸ್ಥಳಗಳಲ್ಲಿ ಭೋಧನೆಯು ಉರ್ದು ಮತ್ತು ಪರ್ಶಿಯನ್ ಭಾಷೆಯಲ್ಲಿ ನಡೆಸಬೇಕು ಮುಸ್ಲಿಂ ಬಡ ವಿಧ್ಯಾರ್ಥಿಗಳಿಗೆ ವಿಧ್ಯಾರ್ಥಿವೇತನವನ್ನು ಒದಗಿಸುವ ಶಿಫಾರಸ್ಸನ್ನು ಮಾಡಿತು. (ಓಬಳೇಶ್ ಘಟ್ಟಿ, ೧೯೯೨, ಪು.ಸಂ. ೬೮)

ಹರ್ಟಾಗ ಆಯೋಗ

ಮುಸ್ಲೀಮರಿಗೆ ಪ್ರತ್ಯೇಕ ಕಡ್ಡಾಯ ಶಿಕ್ಷಣವನ್ನು ಕೊಡಬೇಕೆಂದು ಬಾಲಕೀಯರ ಅವಶ್ಯ-ಕತೆಗಳಿಗನುಗುಣವಾಗಿ ಪಠ್ಯಪುಸ್ತಕ ವೈವಿದ್ಯತೆಯಿಂದ ಕೂಡಿದ ವಾಣಿಜ್ಯ ಮತ್ತು ಔದ್ಯೋಗಿಕ ವಿಷಯಗಳನ್ನು ಭೋಧಿಸುವಂತೆ ಪ್ರಯತ್ನ ಮಾಡಿತು. (ಓಬಳೇಶ್ ಘಟ್ಟಿ, ೧೯೯೨, ಪು.ಸಂ. ೧೦೦-೧೦೧).

**ಸ್ವತಂತ್ರದ ನಂತರ ಮಹಿಳಾ ಶಿಕ್ಷಣಕ್ಕಾಗಿರುವ ಸರ್ಕಾರದ ಪ್ರೋತ್ಸಾಹ ಅಂಶಗಳು**

೧. ೧೯೪೮-೪೯ರ ವಿಶ್ವವಿದ್ಯಾಲಯ ಶಿಕ್ಷಣ ಆಯೋಗವು ನಿರ್ದಿಷ್ಟವಾಗಿ ವಿಶ್ವವಿದ್ಯಾಲಯ ಶಿಕ್ಷಣ ಕುರಿತು ಮಾತ್ರ ಅಧ್ಯಯನ ಮಾಡಿ ಕಾಲೇಜುಗಳಲ್ಲಿ ಮಹಿಳೆಯರಿಗೆ ಸಾಮಾನ್ಯ ಸೌಲಭ್ಯಗಳನ್ನು, ಸಮಾನವೇತನ, ಶೈಕ್ಷಣಿಕ ಅವಕಾಶ ಮತ್ತು ಮಾರ್ಗದರ್ಶನಗಳನ್ನು ಹೆಚ್ಚಿಸುವುದು, ಶಿಕ್ಷಣದಲ್ಲಿ ಸಮಾನ ಅಂಶಗಳು ಹಾಗೂ ಸಾಮಾನ್ಯ ಮಾನವ ಸ್ಥಾನಮಾನ ಅವಶ್ಯಕತೆಯನ್ನು ಎತ್ತಿ ಹಿಡಿಯಿತು.

೨. ೧೯೫೯ ರ ಮಹಿಳೆಯರ ಶಿಕ್ಷಣದ ರಾಷ್ಟ್ರೀಯ ಸಮಿತಿ ಔಪಚಾರಿಕ ಶಾಲೆಗಳಿಗೆ ಹೆಣ್ಣುಮಕ್ಕಳ ಸಾರ್ವತ್ರಿಕ ದಾಖಲಾತಿ ಮೂಲಕವಲ್ಲದೆ ಸಂಕ್ಷಿಪ್ತಗೊಳಿಸಿದ ಕೋರ್ಸಗಳುಉತ್ತಮ ಪಡಿಸಿಕೊಳ್ಳುವ.(ರಾಧಾಮಣಿ.ಡಿ, ಡಾ.ಸುನಿತಾ.ಸಿಎನ್, ಡಾ.ಶಶಿಕಲಾ.ಎ,೨೦೦೩, ಪು.ಸಂ. ೫೮).

೩. ಕಾರ್ಯಕ್ರಮಗಳು,ನ ವಿಚಾರ ಗೊಷ್ಠಿಗಳು, ಮುಂದುವರೆದ ಶಿಕ್ಷಣ,ತಾಂತ್ರಿಕ ಶಿಕ್ಷಣ ಸಂಸ್ಥೆಗಳನ್ನು ತೆರೆಯುವುದು ಮತ್ತು ವಿಶೇಷ ಅನುಕೂಲತೆಗಳನ್ನು, ವಿಧ್ಯಾರ್ಥಿ ವೇತನಗಳನ್ನು ನೀಡುವುದರ ಮೂಲಕ ಬಾಲಕರ ಹಾಗೂ ಬಾಲಕಿಯರ ಶಿಕ್ಷಣದ ನಡುವೆ ಅಂತರವನ್ನು ನಿವಾರಿಸುವ ಎಲ್ಲಾ ಕ್ರಮಗಳನ್ನು ಕೈಗೊಳ್ಳುವಂತೆ ಶಿಫಾರಸ್ಸು ಮಾಡಿತು.

೪. ೧೯೬೩ರ ಭಕ್ತ ವತ್ಸಲಂ ಸಮಿತಿಯು ಹೆಣ್ಣುಮಕ್ಕಳ ಶಿಕ್ಷಣವನ್ನು ಜನಪ್ರಿಯಗೊಳಿಸಲು ಹಲವಾರು ಕ್ರಮಗಳನ್ನು ಸಲಹೆಮಾಡಿತು. ಅವುಗಳಲ್ಲಿ ಹೆಣ್ಣುಮಕ್ಕಳಿಗಾಗಿ ಪೂರ್ವಪ್ರಾಥಮಿಕ ಶಾಲೆಗಳನ್ನು ತೆರೆದು ಈ ಶಾಲೆಗಳನ್ನು ಪ್ರಾಥಮಿಕ ಶಾಲೆಗಳಿಗೆ ಹೊಂದಿಸಬೇಕೆಂದು ಹೆಚ್ಚು ಆಕರ್ಷಕ ಶಾಲಾ ಕಾರ್ಯಕ್ರಮಗಳನ್ನು ಒದಗಿಸುವುದರ ಜೊತೆಗೆ ಶಿಕ್ಷಕಿಯರನ್ನು ನೇಮಿಸಬೇಕೆಂದು ಶಿಫಾರಸ್ಸು ಮಾಡಿತು.

೫. ಮಹಿಳೆಯರ ಶಿಕ್ಷಣಕ್ಕಾಗಿ ಶ್ರೀಮತಿ ಹನ್ಸಾಮೆಹತಾ ಸಮಿತಿ ಪ್ರಾಥಮಿಕ ಮಟ್ಟದಲ್ಲಿ ಸಹ ಶಿಕ್ಷಣವನ್ನು ಶಿಫಾರಸ್ಸು ಮಾಡಿತು. ಅಲ್ಲದೆ ಆರಂಭಿಕ ಶಿಕ್ಷಣದ ಪಠ್ಯ ಶಾಲೆಗಳಲ್ಲಿ ಶಿಕ್ಷಕಿಯರ ಪ್ರಮಾಣ ಹೆಚ್ಚಿಸಬೇಕೆಂದು ಶಿಫಾರಸ್ಸು ಮಾಡಿತು.

೬. ೧೯೬೪ರ ಮಹಿಳೆಯರ ಶಿಕ್ಷಣದ ರಾಷ್ಟ್ರೀಯ ಸಮಿತಿಯ ಶಾಲಾ ಶಿಕ್ಷಣದ ವಯಸ್ಸಿನ ಹೆಣ್ಣು ಮಕ್ಕಳು ಹಾಗು ವಯಸ್ಕರ ಮಹಿಳೆಯರ ಶಿಕ್ಷಣಕ್ಕೆ ಸಂಭಂದಿಸಿದ ವಿಷಯಗಳನ್ನು ಕುರಿತು ಸರ್ಕಾರಕ್ಕೆ ಹೆಚ್ಚು ಸಲಹೆ ನೀಡಿತು.

೭. ೧೯೬೪- ೬೬ ರ ಕೊಠಾರಿ ಆಯೊಗವು ಶಿಕ್ಷಣದ ವ್ಯಾಪಕತೆ ಹಾಗೂ ಅಭಿವೃದ್ಧಿಗಾಗಿ ಕೈಗೊಳ್ಳುವ ಸಾಮಾನ್ಯ ಕಾರ್ಯಕ್ರಮಗಳಲ್ಲಿ ಎಲ್ಲಾ ಹಂತಗಳಲ್ಲಿಯೂ ಎಲ್ಲ ಕ್ಷೇತ್ರಗಳಲ್ಲಿಯು ಹೆಣ್ಣು ಮಕ್ಕಳ ಶಿಕ್ಷಣವು ಅವಿಭಾಜ್ಯ ಅಂಗವಾಗಬೇಕೆಂದು ಒತ್ತಿ ಹೇಳಿದೆ ವಿಶೇಷ ಯೋಜನಗಳು ಹಾಗೂ ವಿಶೇಷ ಕಾರ್ಯ ತಂತ್ರಗಳ ಮೂಲಕ ಈಗಿರುವ ಅಂತರವನ್ನು ಸಾಧ್ಯವಾದಷ್ಟು ನಿವಾರಿಸಬೇಕೆಂದು ಹೇಳಿತು .

೮. ೧೯೮೬ ರ ರಾಷ್ಟ್ರೀಯ ಶಿಕ್ಷಣ ನೀತಿಯು ಶಿಕ್ಷಣವನ್ನು ಸ್ತ್ರೀಯರ ಸ್ಥಾನಮಾನ ಹೆಚ್ಚಿಸಲು ಮತ್ತು ಸ್ತ್ರೀ ಸಬಲಿಕರಣಕ್ಕಾಗಿ ಸಮಾನತೆಗಾಗಿ ಶಿಕ್ಷಣವನ್ನು ನೀಡಬೇಕೆಂದು ಹೇಳಿದ. ಮಹಿಳಾ ಅಧ್ಯಯನವನ್ನು ಪ್ರೋತ್ಸಾಹಿಸುವುದು ಅನಕ್ಷರತೆಯ ನಿರ್ಮೂಲನೆ ಮತ್ತು ತಾಂತ್ರಿಕ ಹಾಗೂ ಔದ್ಯೋಗಿಕ ಶಿಕ್ಷಣದಲ್ಲಿ ಮಹಿಳೆಯರ ಸಹಭಾಗಿತ್ವಗಳೂ ಅವಶ್ಯಕವಾಗಿದೆ.

ಹೆಣ್ಣುಮಕ್ಕಳ ಶಿಕ್ಷಣ ಉತ್ತೇಜಿಸಲು ಕೇಂದ್ರ ಹಾಗೂ ರಾಜ್ಯಸರ್ಕಾರಗಳು ಹಲವಾರು ಕ್ರಮಗಳನ್ನು ಕೈಗೊಂಡಿದೆ. ಅವು ಈ ರೀತಿ ಇವೆ.

❖ ರಾಜ್ಯ ಶಿಕ್ಷಣ ನಿರ್ದೇಶನಾಲಯಗಳಲ್ಲಿ ಹೆಣ್ಣು ಮಕ್ಕಳ ಶಿಕ್ಷಣ ಕಾರ್ಯ ಕ್ರಮಗಳನ್ನು ನೊಡಿಕೊಳ್ಳಲು ಪ್ರತ್ಯೇಕ ವಿಭಾಗಗಳು ಸ್ಥಾಪಿಸಿದೆ.

❖ ಹೆಣ್ಣು ಮಕ್ಕಳಿಗಾಗಿ ಪಾಲಿಟೆಕ್ನಿಕ್ ಸ್ಥಾಪನೆ ಹಾಗೂ ಸಂಕ್ಷಿಪ್ತಗೊಳಿಸಿದ ಕೋರ್ಸಗಳು ಸ್ಥಾಪಿಸುವುದು.

❖ ಮಹಿಳಾ ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವ ಸ್ವಯಂ ಸೇವಾಶಿಕ್ಷಣ ಸಂಸ್ಥೆಗಳಿಗೆ ಸಹಾಯ ಮಾಡುತ್ತದೆ.

❖ ಗ್ರಾಮೀಣ ಪ್ರದೇಶದಲ್ಲಿ ಶಿಕ್ಷಕಿಯರ ವಾಸಕ್ಕಾಗಿ ಗೃಹ ನಿರ್ಮಾಣ ಹೆಣ್ಣು ಮಕ್ಕಳಿಗೆ ಹಾಸ್ಟಲಗಳ ಸೌಲಭ್ಯ ಒದಗಿಸಿ ಕೊಡುತ್ತದೆ.

❖ ಹೆಣ್ಣುಮಕ್ಕಳ ಶಿಕ್ಷಣದ ಸಮಸ್ಯೆಗಳನ್ನು ಕಾರ್ಯಕ್ರಮಗಳನ್ನು ಚರ್ಚಿಸಲು ಬೇರೆ ಬೇರೆ ರಾಜಗಳಲ್ಲಿ ವಿಚಾರಗೊಷ್ಠಿಗಳು ಮಾಡುತ್ತದೆ. (ರಾಧಾಮಣಿ.ಡಿ, ಡಾ.ಸುನಿತಾ.ಸಿಎನ್, ಡಾ.ಶಶಿಕಲಾ.ಎ, ೨೦೦೩, ಪು.ಸಂ. ೫೯).

ಸ್ವಾತಂತ್ರ್ಯ ಪೂರ್ವದಲ್ಲಿ ಅನಕ್ಷರತೆಯ ಕೂಪವಾಗಿತ್ತೆಂದು ಗಾಂಧೀಜಿಯವರು ಶಿಕ್ಷಣವಿಲ್ಲದೆ ಪ್ರಜಾ ಪ್ರಭುತ್ವ ಯಶಸ್ಸು ಕಾಣಲಾರದು ಅದರಲ್ಲೂ ಮಹಿಳೆಯರ ಶಿಕ್ಷಣವು ಅತಿಪ್ರಮುಖವಾಗಿದೆ. ಎಂದು ಮಹಿಳೆಯರ ಶಿಕ್ಷಣಕ್ಕಾಗಿ ಶ್ರಮಿಸಿದರು. ಇವರು ಹೇಳಿದ ಸಾರವನ್ನು ಮನಗಂಡು ಸ್ವತಂತ್ರ ಭಾರತದ ಸರ್ಕಾರಗಳು ಶೈಕ್ಷಣಿಕ ವ್ಯವಸ್ಥೆಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದರು ಅನೇಕ ಯೋಜನಗಳನ್ನು ಮತ್ತು ಕಾರ್ಯ ತಂತ್ರಗಳನ್ನು ರೂಪಿಸಿ ಅವುಗಳನ್ನು ಅನುಷ್ಠಾನಗೊಳಿಸಿ ಕಾರ್ಯ ರೂಪಕ್ಕೆ ತರುವಲ್ಲಿ ಸರ್ಕಾರದ ಪ್ರಯತ್ನ ಅನಿರತವಾದುದು ಈ ದಿಶೆಯಲ್ಲಿ ಈ ಕೆಳಕಂಡ ಯೊಜನಗಳು ರೂಪಿಸಲಾಗಿದೆ.

### ೧. ವಿದ್ಯಾರ್ಥಿ ವೇತನ

ಹೆಣ್ಣು ಮಕ್ಕಳಿಗೆ ಸೇರಿದಂತೆ ಎಲ್ಲಾ ಬಡಮಕ್ಕಳಿಗೆ ಮತ್ತು ಅರ್ಹತೆಯುಳ್ಳ ಮಕ್ಕಳಿಗೆ ತಮ್ಮ ವಿದ್ಯಾಬ್ಯಾಸವನ್ನು ಮುಂದುವರೆಸಿಕೊಂಡು ಹೋಗಲು ಕರ್ನಾಟಕ ರಾಜ್ಯಸರ್ಕಾರವು ಅವರಿಗೆ ಕೆಲವು ವಿದ್ಯಾರ್ಥಿ ವೇತನಗಳನ್ನು ಹಾಗೂ ರೀಯಾಯತಿಯನ್ನು ನೀಡುತ್ತಾ ಬಂದಿದೆ.(ರೇಣುಕಾ ಜಿ.ಎಸ್, ೨೦೦೪, ಪು.ಸಂ. ೩೩೦).

### ೨. ಉಚಿತ ಪಠ್ಯಪುಸ್ತಕ ಮತ್ತು ಸಮವಸ್ತ್ರ ಯೋಜನೆ.

ಶಿಕ್ಷಣವನ್ನು ಪಡೆಯ ಬೇಕು ಎಂದು ಹಂಬಲ ಉಳ್ಳ ಬಹುತೇಕ ಮಕ್ಕಳು ಆರ್ಥಿಕವಾಗಿ ಹಿಂದುಳಿದ ಮತ್ತು ಮಧ್ಯಮ ಕುಟುಂಬಗಳಿಗೆ ಸೇರಿದವರಾಗಿದ್ದಾರೆ. ಇವರಿಗೆ ಶಿಕ್ಷಣವು ಹೊರೆಯಾಗಿದೆ. ಮಕ್ಕಳಿಗೆ ಪಠ್ಯಪುಸ್ತಕ ಮತ್ತು ಸಮವಸ್ತ್ರಗಳನ್ನು ಕೊಳ್ಳುವುದು ದುಸ್ತರವಾದುದರಿಂದ ಶಾಲಾ ಹಾಜರಾತಿಯಲ್ಲಿ ಕೊರತೆ ಶಾಲೆ ಬಿಡುವವರ ಸಂಖ್ಯೆಯಲ್ಲಿ ಹೆಚ್ಚಳ ಉಂಟಾಗುತ್ತದೆ.

ಈ ಸಮಸ್ಯೆಗಳನ್ನು ನೀಗಿಸಲು ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಅನೇಕ ಯೋಜನೆಯನ್ನು ಜಾರಿಗೆ ತಂದಿದೆ. ಒಂದರಿಂದ ಏಳನೇ ತರಗತಿಯ ವರೆಗಿನ ಎಲ್ಲಾ ಮಕ್ಕಳಿಗೆ ಈ ಯೋಜನೆಯು ಅನ್ವಯವಾಗುತ್ತದೆ. ಈ ಯೋಜನೆಯಿಂದ ಶಾಲೆಗೆ ಬರುವ ಹೆಣ್ಣುಮಕ್ಕಳ ಸಂಖ್ಯೆಯಲ್ಲಿ ಗಣನೀಯವಾಗಿ ಏರಿಕೆ ಕಂಡುಬಂದಿವೆ. (ರೇಣುಕಾ ಜಿ.ಎಸ್, ೨೦೦೪, ಪು.ಸಂ. ೩೩೨).

**೩. ಮಧ್ಯಾಯನದ ಊಟಯೋಜನ (Mid Day meals scheme)**

ಕರ್ನಾಟಕ ರಾಜ್ಯವು ಈ ಯೋಜನೆಯನ್ನು ಕೇರ್ ಸಂಸ್ಥೆಯ ನೆರವಿನಿಂದ ೧೯೬೩ ಅಕ್ಟೋಬರ್ ತಿಂಗಳಲ್ಲಿ ಪ್ರಾರಂಭಿಸಿತು. ೩ ರಿಂದ ೧೨ ವರ್ಷದ ಮಕ್ಕಳಿಗೆ ಈ ಪದಾರ್ಥಗಳನ್ನು ಉಪಹಾರ ರೂಪದಲ್ಲಿ ಒದಗಿಸಲಾಗುತ್ತಿದೆ. ಶಿಕ್ಷಣದ ಗುಣ ಮಟ್ಟ ಮತ್ತು ಪ್ರಮಾಣ ಹೆಚ್ಚಿಸುವುದು. ಮದ್ಯಾಹ್ನದ ಹಾಜರಾತಿಯು ಕಡಿಮೆ ಯಾಗುತ್ತಿದ್ದ ಕಾರಣ ಈ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ. (ರೇಣುಕಾ ಜಿ.ಎಸ್, ೨೦೦೪, ಪು.ಸಂ. ೩೩೩). ಬಡ ಕುಟುಂಬಗಳಿಂದ ಬರುವ ವಿದ್ಯಾರ್ಥಿಗಳ ಪೌಷ್ಠಿಕತೆಯ ಮಟ್ಟ ಉತ್ತಮ ಗೊಳಿಸಿ ಹಸಿವಿನಿಂದ ಮುಕ್ತಗೊಳಿಸುವುದು.

**೪. ಕೇಂದ್ರಸರ್ಕಾರದ ಪ್ರೋತ್ಸಾಹಕಗಳು**

ಈ ಯೋಜನೆಯು ಶಾಲೆ ಬಿಡುವವರ ಪ್ರಮಾಣ ಕಡಿಮೆ ಮಾಡುವ ಗುರಿ ಹೊಂದಿದ್ದು ಜೊತೆಗೆ ವಿದ್ಯಾರ್ಥಿಗಳು ಶೈಕ್ಷಣಿಕ ಸಾದನೆಯನ್ನು ಪಡಿಸಲು ಪ್ರಯತ್ನಿಸುವುದು ವಿಶೇಷವಾಗಿ ಈ ಯೋಜನೆಯು ಹೆಣ್ಣು ಮಕ್ಕಳು ಅವಕಾಶವಂತ ಮುಸ್ಲಿಂ ಮಕ್ಕಳು ದುಡಿಯುವ ಮಕ್ಕಳು ಪ್ರಾಥಮಿಕ ಶಾಲೆಗೆ ಹಾಜರಾಗುವ ಅವಕಾಶ ಕಡಿಮೆ ಇರುವವರ ಮೇಲೆ ಗಮನ ಹರಿಸುತ್ತದೆ (ರಾಧಾಮಣಿ.ಡಿ, ಡಾ.ಸುನಿತಾ.ಸಿಎನ್, ಡಾ.ಶಶಿಕಲಾ.ಎ,೨೦೦೩, ಪು.ಸಂ. ೮೪-೮೫).

**೫. ಕಪ್ಪು ಹಲಗೆಯ ಕಾರ್ಯ ಚರಣೆ.**

ಮಕ್ಕಳ ಉಳಿತ ಮತ್ತು ಕಲಿಕೆಗಳಿಗೆ ಅಡ್ಡಿಯುಂಟು ಮಾಡುವ ಅಂಶಗಳಾದ ಬಹುಸಂಖ್ಯೆಯ ಏಕೋಪಾಧ್ಯಾಯ ಶಾಲೆಗಳು ಶಿಕ್ಷಕಿಯರ ಕೊರತೆ ಭೋಧನೆ ಮತ್ತು ಕಲಿಕಾಸಾಮಗ್ರಿಗಳ ಕೊರತೆಗಳನ್ನು ನಿವಾರಿಸಲು ಕೇಂದ್ರ ಸರ್ಕಾರದ ಪ್ರೋತ್ಸಾಹದಯಲ್ಲಿ ರಾಜ್ಯ ಸರ್ಕಾರಗಳು ಕಪ್ಪುಹಲಗೆ ಕಾರ್ಯಾಚರಣೆ ಪ್ರಾರಂಭಿಸಿತು. ದಾಖಲಾದಮಕ್ಕಳು ಶಾಲೆಯಲ್ಲಿ ಉಳಿಯುವಂತೆ

ಪ್ರಾಥಮಿಕ ಶಾಲೆಗಳಲ್ಲಿ ಅನುಕೂಲತೆಗಳನ್ನು ಗಣನೀಯವಾಗಿ ಉತ್ತಮ ಪಡಿಸಲು ೧೯೮೭ -೮೮ ರಲ್ಲಿ 'ಕಪ್ಪುಹಲಗೆ ಕಾರ್ಯ ಚರಣೆ' ಪ್ರಾರಂಭಿಸಿದೆ.

## ೬. ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ (D.P.E.P)

೧೯೮೬ ರ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ಪುನರ ವಿಮರ್ಶಿಸಿ ಪ್ರಾಥಮಿಕ ಶಿಕ್ಷಣದ ಬೆಳವಣಿಗೆಗೆ ಜಿಲ್ಲಾ ಮಟ್ಟದಲ್ಲಿ ಗಮನ ಕೇಂದ್ರೀಕರಿಸಿ ಸಮನ್ವಯ ಕ್ರಮ ಕೈಗೊಳ್ಳುವ ಅಗತ್ಯವನ್ನು ಒತ್ತಿಹೇಳಿತು ಇದು ಪ್ರಾಥಮಿಕ ಶಾಲೆಗಳಲ್ಲಿ ದಾಖಲಾತಿ ಉಳಿವಿಕೆ ಮತ್ತು ಗುಣ ಮಟ್ಟವನ್ನು ಹೆಚ್ಚಿಸಲು ಕೇಂದ್ರ ಸರ್ಕಾರದ ಅತ್ಯಂತ ತೀವ್ರ ಪ್ರಯತ್ನವಾಗಿದೆ. ಈ ಕಾರ್ಯಕ್ರಮವು ಹೆಣ್ಣು ಮಕ್ಕಳ ಸಾಕ್ಷರತೆಯು ಸರಾಸರಿಗಿಂತ ಕಡಿಮೆ ಇರುವ ಜಿಲ್ಲೆಗಳಲ್ಲಿ ಹೆಣ್ಣು ತೊಡಗಿಸುವ ಗುರಿ ಹೊಂದಿದ್ದು(ರಾಧಾಮಣಿ.ಡಿ, ಡಾ.ಸುನಿತಾ.ಸಿಎನ್, ಡಾ.ಶಶಿಕಲಾ.ಎ,೨೦೦೩, ಪು.ಸಂ. ೯೦-೯೧). ಜನತೆಯ ಸಹಬಾಗಿತ್ವ ಉತ್ತೇಜಿಸುವುದಕ್ಕಾಗಿ ಈ ಯೋಜನೆಯನ್ನು ಜಿಲ್ಲಾ ಮಟ್ಟಕ್ಕೆ ವಿಕೇಂದ್ರಿಕರಿಸುವುದು. ಅದೇ ರೀತಿ ಜಿಲ್ಲಾಮಟ್ಟದಲ್ಲಿ ಅವಿಧ್ಯಾವಂತ ಮುಸ್ಲಿಮರ ಜನಗಣತಿ ಮಾಡಬೇಕಾಗಿದೆ. ಈ ನಿಟ್ಟಿನಲ್ಲಿ ಜಿಲ್ಲೆಯ ಶ್ರೀಮಂತ ಮುಸ್ಲಿಂರು ರಾಜಕೀಯ ಮುಂದಾಳುಗಳು, ಶಿಕ್ಷಣ ತಜ್ಞರು, ಸಾಂಸ್ಕೃತಿಕ ಸಂಘ ಸಂಸ್ಥೆಗಳು ಇಲ್ಲಿ ದುಡಿಯ ಬೇಕಾಗಿದೆ.(ಮಹಮ್ಮದ್ ಕುಳಾಯಿ, ಶರ್ಫುದ್ದಿನ್ ಬಿ.ಎನ್, ಅಕ್ಬರ್ ಅಲಿ, ೨೦೦೦, ಪು.ಸಂ.೯೭).

## ೭. ಸರ್ವ ಶಿಕ್ಷಣ ಅಭಿಯಾನ (SSA)

ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣಕ್ಕಾಗಿ ಮೊಟ್ಟಮೊದಲ ರಾಷ್ಟ್ರೀಯ ಕಾರ್ಯಕ್ರಮವನ್ನು ೨೦೦೧ರಲ್ಲಿ ಪ್ರಾರಂಭವಾಯಿತು ದೇಶದಾದ್ಯಂತ ಗುಣಮಟ್ಟದ ಪ್ರಾಥಮಿಕ ಶಿಕ್ಷಣದ ಬೇಡಿಕೆಗೆ ಅನುಗುಣವಾಗಿ ಈ ಅಂದೋಲನವು ರೂಪಗೊಂಡಿದೆ. ಲಿಂಗ ಮತ್ತು ಸಮಾಜಿಕ ಅಂತರಗಳನ್ನು ನಿವಾರಿಸುವ ಉದ್ದೇಶ ಇದು ಹೊಂದಿದೆ. (ರಾಧಾಮಣಿ.ಡಿ, ಡಾ.ಸುನಿತಾ.ಸಿಎನ್, ಡಾ.ಶಶಿಕಲಾ.ಎ,೨೦೦೩, ಪು.ಸಂ. ೯೭). ಹೆಣ್ಣು ಮಕ್ಕಳ ಶಿಕ್ಷಣ ಅದರಲ್ಲಿಯೂ ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗ ಮತ್ತು ಅಲ್ಪಸಂಖ್ಯಾತ ಹೆಣ್ಣು ಮಕ್ಕಳಿಗೆ ಶಿಕ್ಷಣ ಒದಗಿಸುವುದು ಸರ್ವಶಿಕ್ಷಣ ಅಭಿಯಾನದ ಪ್ರಧಾನ ಕಾಳಜಿಯಾಗಿದೆ.

**ಮದ್ಯದಲ್ಲಿಯೇ ಶಾಲೆಬಿಟ್ಟ ಮಕ್ಕಳು ಪುನ: ಶಾಲೆಗೆ ಬರುವಂತೆ ವಿವಿಧ ಕಾರ್ಯ ಕ್ರಮಗಳು ಸರಕಾರ ಹಾಕಿಕೊಂಡಿದೆ ಅವು ರೀತಿ ಇವೆ.**

ಶಾಲೆಯಿಂದ ಹೊರಗುಳಿದಿರುವ ಮಕ್ಕಳಿಗೆ. ಶಿಕ್ಷಣ ನೀಡುವುದು ರಾಜ್ಯಕ್ಕೆ ಅತಿ ದೊಡ್ಡ ಸವಾಲಾಗಿದೆ. ಶಾಲೆ ಬಿಟ್ಟ ಮಕ್ಕಳಿಗೆ. ಶಾಲೆಗೆ ದಾಖಲಾಗದ ಮಕ್ಕಳಿಗೆ. ಮತ್ತು ಮರಳಿ ಶಾಲೆಗೆ ಬರುವಂತೆ ಬೇರೆ ಬೇರೆ ಕಾರ್ಯ ಕ್ರಮಗಳನ್ನು ಹಾಕಿಕೊಳ್ಳಲಾಗಿದೆ. (ರಾಧಾಮಣಿ.ಡಿ, ಡಾ.ಸುನಿತಾ.ಸಿಎನ್, ಡಾ.ಶಶಿಕಲಾ.ಎ,೨೦೦೩, ಪು.ಸಂ. ೧೩೩).

**೧. ಚಿಣ್ಣರ ಅಂಗಳ**

ದಾಖಲಾಗಿ ನಡುವೆ ಬಿಟ್ಟ ದಾಖಲಾಗದೇ ಉಳಿದ ೬ ರಿಂದಸ ೧೪ ವರ್ಷದ ಎಲ್ಲಾ ಮಕ್ಕಳನ್ನು ಮುಖ್ಯವಾಹಿನಿಗೆ ಸೇರಿಸಲು ಬೇಸಿಗೆರಜೆಯಲ್ಲಿ ನಡೆಸುವ ಕಾರ್ಯಕ್ರಮ ಇದಾಗಿದೆ. ಆಯ್ಕೆ ಮಾಡಲ್ಪಟ ೧೦ ತಾಲೂಕುಗಳಲ್ಲಿ ೩೨೬೫ ಮಕ್ಕಳನ್ನು ಈ ಕಾರ್ಯಕ್ರಮಕ್ಕೆ ಒಳಪಡಿಸುವ ಗುರಿ ಇದ್ದು ಅವರಲ್ಲಿ ೩೧೦೦ ಮಕ್ಕಳನ್ನು ದಾಖಲು ಮಾಡಲಾಯಿತು. ಈ ಕಾರ್ಯಕ್ರಮಗಳ ಮೂಲಕ ಮಕ್ಕಳಿಗೆ ವಸತಿ ಮತ್ತು ಆಹಾರವನ್ನು ಒದಗಿಸಲಾಗುತ್ತದೆ.

**೨. ಬಾ ಮರಳಿ ಶಾಲೆಗೆ ಬಾ**

ಶೈಕ್ಷಣಿಕ ವರ್ಷದ ಮಧ್ಯದಲ್ಲಿ ಶಾಲೆಬಿಟ್ಟ ದೀರ್ಘಕಾಲ ಗೈರು ಹಾಜರಾದ ಮಕ್ಕಳನ್ನು ಮತ್ತು ಶಾಲೆಗೆ ಬರುವಂತೆ ೨೦೦೨ ರಲ್ಲಿ ಬಾ ಮರಳಿಶಾಲೆಗೆ ಕಾರ್ಯಕ್ರಮ ಪ್ರಾರಭವಾಯಿತು . ಶಾಲೆಬಿಟ್ಟ ಮಕ್ಕಳನ್ನು ಅವರ ಪೊಷಕರನ್ನು ಬೇಟಿಮಾಡಿ ಮರಳಿ ಶಾಲೆಗೆಬರುವಂತೆ ಮನವಲಿಸುತ್ತದೆ. (ರಾಧಾಮಣಿ.ಡಿ, ಡಾ.ಸುನಿತಾ.ಸಿಎನ್, ಡಾ.ಶಶಿಕಲಾ.ಎ,೨೦೦೩, ಪು.ಸಂ. ೧೩೫).

**೩. ಕೂಲಿಯಿಂದ ಶಾಲೆಗೆ**

ಬಾಲಕಾರ್ಮಿಕರ ವಿರುಧ್ದ ಈ ಕಾರ್ಯ ಕ್ರಮವನ್ನು ಹಮ್ಮಿ ಕೊಳ್ಳಲಾಗಿದೆ ೧೪ ವರ್ಷದೊಳಗಿನ ಮಕ್ಕಳು ಅಪಾಯಕಾರಿ ಕೆಲಸ ಮಾಡುವುದನ್ನು ನಿಷೇಧಿಸಿ ನೇಮಿಸಿ ಕೊಳ್ಳುವರನ್ನು ದಂಡಸಿ ಗುರಿ ಪಡಿಸಲಾಗುತ್ತದೆ ಸಮಾಜ ಕಲ್ಯಾಣ ಇಲಾಖೆ ಮತ್ತು ಮಹಿಳೆ ಮತ್ತು ಮಕ್ಕಳ ಕಲ್ಯಾಣ ಇಲಾಖೆಗಳ ಸಹಕಾರದಿಂದ ಬಾಲಕಾರ್ಮಿಕ ಸಮಸ್ಯೆ ಪರಿಹರಿಸಲು ಯತ್ನಿಸಿಲಾಗಿದೆ.

**೪. ವಿದ್ಯಾಚೇತನ .**

ವಿದ್ಯಾಚೇತನವು ಚಿಣ್ಣರ ಅಂಗಳಕ್ಕಾಗಿ ತಯಾರಿಸಿರುವ ಪುಸ್ತಕಗಳೊಂದಿಗೆ ತರಗತಿ ಸಂವಹನ ಆರಂಭ ವಾಗುವುದು ದುಡಿಯುವ ಮಕ್ಕಳು ತಂಗಿ ತಮ್ಮಂದಿರನ್ನು ನೋಡಿಕೊಳ್ಳ ಬೇಕಾಗಿರುವ ಹೆಣ್ಣುಮಕ್ಕಳು, ಅಲ್ಪ ಸಂಖ್ಯಾತ ಸಮುದಾಗಳಿಗೆ ಸೇರಿದ ಮಕ್ಕಳು, ವಲಸೆ ಬಂದ ಕುಟುಂಬಗಳ ಮಕ್ಕಳು ಅವಕಾಶ ಮಂಚಿತರಾದವರು ವಿಶೇಷ ಅವಶ್ಯಕತೆಯುಳ್ಳ ಮಕ್ಕಳು ಹಾಗೂ ಶಾಲೆ ಸೇರುವ ಸೌಲಭ್ಯವೇ ಇಲ್ಲದ ಎಲ್ಲಾ ಮಕ್ಕಳು ವಿದ್ಯಾಚೇತಸ ಕಾರ್ಯಕ್ರಮದ ವ್ಯಾಪ್ತಿಗೆ ಬರುವರು.

**೫. ಸಮನ್ವಯ ಶಿಕ್ಷಣ**

ಊನಶಕ್ತಿ ಮಕ್ಕಳನ್ನು ಗುರ್ತಿಸಿ ಸಾಮಾನ್ಯ ಶಾಲೆಗಳಿಗೆ ದಾಖಲು ಮಾಡಿ ಶೈಕ್ಷಣಿಕ ನೆರವು ಒದಗಿಸು ವುದೇ ಈ ಕಾರ್ಯ ಕ್ರಮದ ಮುಖ್ಯ ಉದ್ದೇಶಗಳಾಗಿವೆ (ರಾಧಾಮಣಿ.ಡಿ, ಡಾ.ಸುನಿತಾ.ಸಿಎನ್, ಡಾ.ಶಶಿಕಲಾ.ಎ,೨೦೦೩, ಪು.ಸಂ. ೧೩೫).

**೯ ನೇ ಪಂಚವಾರ್ಷಿಕ ಯೋಜನೆಯಲ್ಲಿ ಮಹಿಳಾ ಶಿಕ್ಷಣಕ್ಕೆ ವಿಶೇಷ ಕಾರ್ಯಕ್ರಮಗಳನ್ನು ಹಾಕಿಕೊಳ್ಳಲಾಗಿದೆ.**

ಆ ಕಾರ್ಯಕ್ರಮವು ಈ ರೀತಿಯಾಗಿವೆ.ಮತ್ತು ಎಂದೆಂದಿಗೂ ಶಾಲೆಗೆ ಹೋಗದಿರುವ ಮಕ್ಕಳ ವಿಶೇಷವಾಗಿ ಹೆಣ್ಣು ಮಕ್ಕಳ ಸಂಖ್ಯೆಯು ದಲಿತ ಮತ್ತು ಹಿಂದುಳಿದ ಹಾಗು ಮುಸ್ಲಿಂ ವರ್ಗಗಳಲ್ಲ ಅತಿಹೆಚ್ಚಾಗಿದ್ದು ಕಡುಬಡತನ ಮತ್ತು ಸಮಾಜಿಕ ಅನಾನೂಕೂಲತೆಯೇ ಪ್ರಮುಖ ಕಾರಣವಾಗಿದೆ ಅದರಲ್ಲಿ ಮುಸ್ಲಿಂ ಮಹಿಳೆಯರ ಶಿಕ್ಷಣ ವೃದ್ಧಿಸಲು ಕೆಲವು ಕಾರ್ಯ ಕ್ರಮಗಳು ಈ ರೀತಿ ಯಾಗಿದೆ.

೧.ಮುಸ್ಲಿಂ ಮಹಿಳೆಯರ/ ಹೆಣ್ಣು ಮಕ್ಕಳ ಶಿಕ್ಷಣವನ್ನು ಬಲಪಡಿಸಲು ಮೌಲಾನಾ ಅಜಾದ ಶಿಕ್ಷಣ ಪ್ರತಿಷ್ಠಾನ ನವದೆಹಲಿಯ ಕಾರ್ಯಕ್ರಮಗಳನ್ನು ವಿಸ್ತರಿಸಿ ಬಲಪಡಿಸುವಂತೆ ಮಾಡುವುದು ಮುಸ್ಲಿಂ ಹೆಣ್ಣು ಮಕ್ಕಳನ್ನು ಉನ್ನತ ಸಾಮಾನ್ಯ ಶಿಕ್ಷಣ ಮತ್ತು ತಾಂತ್ರಿಕ ಶಿಕ್ಷಣ ಪಡೆಯಲು ನೆರವಾಗಲು ಶಿಷ್ಯ ವೇತನಗಳನ್ನು ಸಂಶೋಧನ ವೇತನಗಳನ್ನು ನೀಡುವ ಕೆಲಸಮಾಡುವುದು.

೨. ಒಂಭತ್ತನೆ ಪಂಚವಾರ್ಷಿಕ ಯೋಜನೆಯಲ್ಲಿ ಮೊಟ್ಟಮೊದಲ ಬಾರಿಗೆ ಮುಸ್ಲಿಂಮಹಿಳೆಯರ ಶಿಕ್ಷಣದಬಗ್ಗೆ ಕುರಿತು ಕಾರ್ಯಗಳನ್ನು ನಿರೂಪಿಸಿ ಜಾರಿಗೊಳಿಸುವ ಅಗತ್ಯಗಳು ವಿಧಿವಿಧಾನಗಳ ಬಗೆಗೆ ಪ್ರಾಸ್ತಾಪ ವಿದೆ. ಈ ಕಾರ್ಯದ ಪ್ರಮುಖ ಲಕ್ಷಣಗಳು ಈ ರೀತಿ ಯಾಗಿವೆ.

೩. ಮುಸ್ಲಿಂ ಮಹಿಳೆಯರ ಎಲ್ಲಾ ಹಂತದ ಮತ್ತು ಶಿಕ್ಷಣದ ಬಗೆಗೆ ಆದ್ಯತೆ ನೀಡುವುದು

೪. ಮುಸ್ಲಿಂ ಜನಸಂಖ್ಯೆ ಅಪಾರ ಪ್ರಮಾಣದಲ್ಲಿ ಕೇಂದ್ರಿಕೃತವಾಗಿರುವ ಸ್ಥಳಗಳಲ್ಲಿ ಮೂಲಭೂತ ಶಿಕ್ಷಣ ಸೇವಾ ಸೌಲಭ್ಯವನ್ನು ಕಲ್ಪಿಸುವುದು ಇದರಮೂಲಕ ಮುಸ್ಲಿಂ ಮಹಿಳೆಯರ ಶಿಕ್ಷಣ ಪ್ರವೇಶಿತ ಸೌಲಭ್ಯವನ್ನು ವಿಸ್ತರಿಸುವುದು.(ಅನ್ನಪೂರ್ಣೇಶ್ವರಿ .ಎನ್,೨೦೦೨, ಪು.ಸಂ.೫೪).

೫. ಮುಸ್ಲಿಂ ಮಹಿಳೆಯರ ಶಿಕ್ಷಣ ಉತ್ತೇಜಿಸಲು ಪ್ರೇರೇಪಿಸಲು ಅವರವರ ತಂದೆ ತಾಯಿ'ಳನ್ನು ಸಮುದಾಯದ ಅಥವಾ ಧರ್ಮದ ನಾಯಕರನ್ನು ಬೇಂಬಲ ಅಥವಾ ಸಹಕಾರ ಪಡೆದುಕೊಳ್ಳವು ಏಕಂದರೆ ಇದು ಮುಸ್ಲಿಂ ಜನಾಂಗದಲ್ಲಿ ಬಹಳ ಮಹತ್ವದ್ದಾಗಿದೆ. ಇವರ ಬೆಂಬಲ ಮತ್ತು ಸಹಕಾರ ವಿಲ್ಲದೆ. ಸರ್ಕಾರದ ಯಾವ ಕಾರ್ಯಕ್ರಮವು ಸಾಮಾನ್ಯ ಮುಸ್ಲಿರನ್ನು ತಲುಪಲು ಸಾಧ್ಯವಿಲ್ಲ.

೬. ಮುಸ್ಲಿಂರ ಸಂಪ್ರದಾಯಿಕ ಶಾಲೆಗಳಾದ 'ಮದರಸಾ'ಗಳ ಶಿಕ್ಷಣ ಕ್ರಮವನ್ನು ಆಧುನಿಕಗೊಳಿಸಲು ಒಂಭತ್ತನೇ ಪಂಚವಾರ್ಷಿ ಯೋಜನೇಯಲ್ಲಿ ವಿಶೇಷ ಆಧ್ಯತೆ ನೀಡಿದೆ ಇದರ ಮೂಲಕ ಮುಸ್ಲಿಂ ವಿದ್ಯಾರ್ಥಿಗಳಲ್ಲಿನ ಶಿಸ್ತಿನ ಕೊರತೆಯನ್ನು ಮತ್ತು ಅಧಿಕವಾಗಿರುವ ಶಾಲಾ ಬಿಡುವಿಕೆಯನ್ನು ನಿವಾರಣೆ ಮಾಡಲು ಪ್ರಯತ್ನಿಸಲಾಯಿತು. ಮದರಸಾಗಳ ಆಧುನೀಕರಣವೆಂದರೆ ಪವಿತ್ರ ಕುರಾನನ ಕಲಿಕೆ ಜೊತೆಗೆ ಗಣಿತ ಶಾಸ್ತ್ರ, ವಿಜ್ಞಾನಗಳು, ಸಾಮಾನ್ಯ ಅಧ್ಯಯನ ಇಂಗ್ಲಿಷ ಎಲ್ಲವನ್ನು ಕಲಿಸುವುದು ಎಂದು ಅರ್ಥೈಸಲಾಗಿದೆ.

ಒಂಭತ್ತನೆ ಪಂಚವಾರ್ಷಿಕಯೋಜನೆಯಲ್ಲಿ ಸರ್ಕಾರ ಜಾರಿಗೊಳಿಸಿರುವ ಇತರ ಶಿಕ್ಷಣ ಕಾರ್ಯಕ್ರಮಗಳು ಈ ರೀತಿಯಾಗಿವೆ ಮುಸ್ಲಿಂ ಮಹಿಳೆಯರ ಮತ್ತು ಹೆಣ್ಣು ಮಕ್ಕಳ ಆರೋಗ್ಯ ಪೌಷ್ಠಿಕ ಆಹಾರದ ಕೊರತೆ ಮತ್ತು ಶೈಕ್ಷಣಿಕ ಸಮಸ್ಯೆಗಳನ್ನು ಪರಿಹರಿಸಲು ಆಧ್ಯತೆ ನೀಡುವುದು ಉನ್ನತ ಶಿಕ್ಷಣವನ್ನು ಉತ್ತೇಜಿಸಲು ಮುಸ್ಲಿಮರು ಅಪಾರವಾಗಿರುವ ಜಿಲ್ಲೆಗಳಲ್ಲಿ ಪರಿಕ್ಷಾ - ಪೂರ್ವಕಲಿಕಾ ಕೇಂದ್ರಗಳನ್ನು ತೆರೆಯುವುದು.

ಮುಸ್ಲಿಂ ಮಹಿಳೆಯರ ಮಕ್ಕಳ ಆಧುನಿಕ ಶಿಕ್ಷಣದ ಸಮಸ್ಯೆಯು ಬಹಳ ಸಂಕೀರ್ಣವಾದುದಾಗಿದೆ. ಮುಸ್ಲಿಂ ಹೆಣ್ಣು ಮಕ್ಕಳ ಶಿಕ್ಷಣದ ಬಗೆಗೆ ಇರಬಹುದಾದ ಮತೀಯ ಉಗ್ರವಾದಿಗಳ ವಿರೋಧವನ್ನು ತೊಡೆದುಹಾಕುವುದು ಹಾಗೂ ಮುಸ್ಲಿಮರ ಕಡುಬಡತನವನ್ನು ಕಡಿಮೆಗೊಳಿಸುವುದು ಇದರ ಮೂಲಕ ಮುಸ್ಲಿಂರ ಅನಕ್ಷರತೆ ಶಿಕ್ಷನದಲ್ಲಿ ಲಿಂಗತಾರತಮ್ಮಗಳು ಮುಸ್ಲಿಂ ಮಹಿಳೆಯುರು ಕೇವಲ

ಧಾರ್ಮಿಕ ಶಿಕ್ಷಣ ಪಷ್ಟಕ್ಕೆ ಅಂಟಿ ಕೊಳ್ಳುವುದರಿಂದ ಉಂಟಾಗುವ ಅಪಾಯಗಳನ್ನು ತಪ್ಪಿಸ ಬಹುದಾಗಿದೆ. (ಅನ್ನಪೂರ್ಣೇಶ್ವರಿ .ಎನ್,೨೦೦೨, ಪು.ಸಂ.೫೪-೫೫).

ಮಧ್ಯದಲ್ಲೆ ಶಾಲೆಬಿಟ್ಟ ಮಕ್ಕಳು ಮರಳಿಶಾಲೆಗೆ ಬರುವಂತ ಸರ್ಕಾರ ಹಲವಾರು ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ ಮಹಿಳೆಯರ ಶಿಕ್ಷಣ ಪ್ರೋತ್ಸಾಹಿಸಲು ಹಲವಾರು ಯೋಜನೆ ಇದ್ದರೂ ಇನ್ನು ಶಲೆಬಿಡುವವರ ಪ್ರಮಾಣ ಕಂಡುಬರುತ್ತದೆ. ಅದರಲ್ಲೂ ಮುಸ್ಲಿಂ ಹೆಣ್ಣು ಮಕ್ಕಳ ಸಂಖ್ಯೆಹೆಚ್ಚು ಹೀಗಾಗಿ ಇನ್ನು ಪ್ರಭಲವಾದ ಯೋಜನೆಗಳು ಜಾರಿಯಲ್ಲಿ ಬರಬೇಕು. ಶಿಕ್ಷಣ ಸಂಸ್ಥೆಗಳು ಸ್ಥಾಪಿಸಲು ಮತ್ತು ಉತ್ತಮಪಡಿಸಲು ದೀರ್ಘ ಆರ್ಥಿಕ ನೆರವು ಬೇಕು. ಇನ್ನು ಪರಿಣಾಮಕಾರಿ ಯಾದ ಕ್ರಮಗಳು ತೆಗೆದುಕೊಳ್ಳಬೇಕು. ಹೆಣ್ಣುಮಕ್ಕಳ ವಿಧ್ಯಾಭ್ಯಾಸಕ್ಕೆ ಪ್ರೋತ್ಸಾಹಿಸಬೇಕು ಶಿಕ್ಷಣ ಸಂಸ್ಥೆಗಳಲ್ಲಿ ಮುಸ್ಲಿಮ ವಿದ್ಯಾರ್ಥಿಗಳಿಗೆ ಕೆಲವು ನಿಶ್ಚಿತ ಶೇಕಡ ಸೀಟುಗಳನ್ನು ಕಾದಿರಿಸ ಬೇಕು.

## ಉಲ್ಲೇಖಗಳು


೧. ಅನ್ನಪೂರ್ಣೇಶ್ವರಿ ಎನ್, ೨೦೦೨,ಮೈಸೂರು, ಗುಪ್ತಾ ಆಫ್ ಸೆಟ್ ಪ್ರಿಂಟರ್ಸ್ ವಿದ್ಯಾರಣ್ಯ.

೨. ಓಬಳೇಶ್ ಘಟ್ಟಿ, ೧೯೯೨, ಭಾರತೀಯ ಶಿಕ್ಷಣ ಮತ್ತು ಪ್ರಚಲಿತ ಸಮಸ್ಯೆಗಳು, ತೋರಣ ಘಟ್ಟ, ಶಿವಗಂಗಾ ಪ್ರಕಾಶನ.

೩. ಮುಹಮ್ಮದ್ ಕುಳಾಯಿ, ಶರ್ಫುದ್ದೀನ್ ಬಿ.ಎಸ್., ಅಕ್ಬರ್ ಅಲಿ, ೨೦೦೦, ಶಿಕ್ಷಣ ಮತ್ತು ಮುಸ್ಲಿಮರು ಮಂಗಳೂರು, ಮುಸ್ಲಿಮ ಲೇಖಕರ ಸಂಘ.

೪. ರೇಣುಕಾ ಜಿ.ಎಸ್., ೨೦೦೪, ಶಿಕ್ಷಣದ ಬುನಾದಿ, ತುಮಕೂರು, ಶಿವಚೇತ ಪ್ರಕಾಶನ.

೫. ಡಾ. ಲಿಡಿಯಾ ಫರ್ನಾಂಡಿಸ್, ಡಾ. ಶಶಿಕಲಾ , ಡಾ.ಆನಂದಿ ಮಾರ್ಟಿಸ್, ೨೦೦೩, ಅನು: ಡಾ. ಶಶಿಕಲಾ.ಎ, ಡಾ. ರಧಾಮಣಿ ಡಿ., ಡಾ. ಸುನಿತಾ ಸಿ.ಎಸ್.,ಆಧುನಿಕ ಶಿಕ್ಷಣದ ಒಲವುಗಳು, ಮೈಸೂರು, ವಿಜಯಲಕ್ಷ್ಮಿ ಪ್ರಕಾಶನ.

೮

## ಅಧ್ಯಯನದ ಫಲಿತಾಂಶಗಳು

"ಪ್ರಾಥಮಿಕ ಶಿಕ್ಷಣದಲ್ಲಿ ಶಾಲೆಬಿಡುವಿಕೆ; ಮುಸ್ಲಿಂ ಸಮುದಾಯದಲ್ಲಿ ಲಿಂಗಾಧಾರಿತ ನೆಲೆಯನ್ನು ಅನುಲಕ್ಷಿಸಿ" ಎಂಬ ವಿಷಯದ ಮೇಲೆ ನಡೆದ ಅಧ್ಯಯನದ ನಂತರ ಈ ಕೆಳಕಂಡ ಅಂಶಗಳು ಪ್ರಮುಖ ಫಲಿತಾಂಶಗಳಾಗಿವೆ. ಅಧ್ಯನಕ್ಕೆ ಆಯ್ಕೆ ಮಾಡಿಕೊಂಡ ಎಲ್ಲಾ ಪ್ರಕರಣಗಳನ್ನು ಅನುಲಕ್ಷಿಸಲಾಗಿ ಕಂಡು ಬಂದ ಫಲಿತಾಂಶಗಳು ಈ ಕೆಳಗಿನಂತೆ ವಿವರಿಸಲಾಗಿದೆ.

ಭಾರತೀಯ ಮುಸ್ಲೀಮರು ಶೈಕ್ಷಣಿಕ ಹಿಂದುಳಿಯುವಿಕೆ ಮಟ್ಟವನ್ನು ತಿಳಿಯಲು ಯಾವುದೇ ಅಧಿಕೃತವಾದ ಅಂಕಿ ಅಂಶಗಳು ಇಲ್ಲಿಯವರೆಗೂ ಲಭ್ಯವಾಗಿಲ್ಲ. ಕೆಲವು ವಿದ್ವಾಂಸರು ಮತ್ತು ಕೆಲವು ಸ್ವತಂತ್ರ ಸಂಘಟನೆಗಳು ದೇಶದ ಕೆಲವು ಭಾಗಗಳಲ್ಲಿ ನಡೆಸಿರುವ ಅಧ್ಯಯನವನ್ನು ಅವಲಂಬಿಸಬೇಕಾಗಿದೆ.

ಮುಸ್ಲೀಮರು ಶೈಕ್ಷಣಿಕವಾಗಿ ಹಿಂದುಳಿಯಲು ಮೂಲಕಾರಣವೆಂದರೆ ಆರ್ಥಿಕವಾಗಿ ಹಿಂದುಳಿಯುವಿಕೆಯೇ ಆಗಿದೆ. ಜಗತ್ತಿನಲ್ಲಿ ಶಾಲೆಗೆ ಸೇರಿ ಅರ್ಧದಲ್ಲೆ ಶಾಲೆಬಿಡುವ ಅಥವಾ ಶಾಲೆಗೆ ಸೇರದ ಮಕ್ಕಳ ಸಂಖ್ಯೆ ಭಾರತದಲ್ಲೇ ಹೆಚ್ಚು ಅದರಲ್ಲಿ ಮುಸ್ಲಿಂ ಮತ್ತು ಹಿಂದುಳಿದ ಜಾತಿಯ ಹೆಣ್ಣು ಮಕ್ಕಳೆ ಹೆಚ್ಚು.

ಹೆಚ್ಚುತ್ತಿರುವ ಕೋಮುವಾದದ ಕಾರಣದಿಂದಾಗಿ ಮಹಿಳೆಯರು ಬಂದಿಸಲ್ಪಡುತ್ತಿದ್ದಾರೆ. ಈ ಕೋಮುಗಲಬೆಗಳು ಆಗುವುದು ಪುರುಷರಿಂದ ಆದರೆ ಅದರ ಪರಿಣಾಮ ಮಹಿಳೆಯರ ಮೇಲೆ ಆಗುತ್ತದೆ. ಅದು ಮಹಿಳೆಯರ ರಾಜಕೀಯ, ಆರ್ಥಿಕ, ಶೈಕ್ಷಣಿಕ ಮತ್ತು ಸಮಾಜಿಕ ಸ್ಥಿತಿಯ ಮೇಲೆ ಪರಿಣಾಮ ಬೀರುತ್ತದೆ. ಮುಸ್ಲಿಂ ಮಹಿಳೆಯರನ್ನು ಕಡ್ಡಾಯವಾಗಿ ಪರದೆ ಹಿಂದೆ ಬಂಧಿತಳಾಗುವಂತೆ ಮಾಡುತ್ತಿದೆ. ಇದರಿಂದ ಮಹಿಳೆಯು ಶಿಕ್ಷಣ ಪಡೆಯುವುದು ಅತ್ಯಲ್ಪವಾಗಿ ಶೈಕ್ಷಣಿಕ ರಂಗ ಪ್ರವೇಶಿಸಿದ ಹೆಣ್ಣುಮಕ್ಕಳಲ್ಲೇ ಅರ್ಧದಲ್ಲೆ ಶಾಲೆ ಬಿಡವಿಕೆ ಅಧಿಕ ಪ್ರಮಾಣದಲ್ಲಿ ಕಂಡುಬರುತ್ತಿದೆ.

ಪ್ರಥಮ ತರಗತಿಯಿಂದ ನಾಲ್ಕನೇ ತರಗತಿಗೆ ಬರುವಾಗ ಅವರ ಸಂಖ್ಯೆಯು ಸುಮಾರು ಅರ್ಧದಷ್ಟು ಕಡಿಮೆ ಯಾಗಿರುವುದು ಕಂಡುಬರುತ್ತದೆ.

ಈ ರೀತಿ ಅವರು ಶಾಲೆ ಬಿಡಲು ಕಾರಣಗಳು ಅನೇಕ ಇವೆ ಅವುಗಳಲ್ಲಿ ಮೊದಲನೆಯದಾಗಿ ಮನೆಯಲ್ಲಿ ಶೈಕ್ಷಣಿಕವಾದ ವಾತವರಣ ಇಲ್ಲದಿರುವುದರಿಂದ ಮಕ್ಕಳು ಕಲಿಕೆಯಲ್ಲಿ ಆಸಕ್ತಿಯನ್ನು ಕಳೆದು ಕೊಳ್ಳುತ್ತಾರೆ. ಮನೆಯಲ್ಲಿ ಅವರಿಗೆ ಕಲಿಸುವಂತೆ ಮನ ವಲಿಸುವ ಪ್ರಯತ್ನ ಯಾರು ಮಾಡುವುದಿಲ್ಲ ಕೊನೆಗೆ ಅವರು ಶಾಲೆಯನ್ನು ಬಿಡುತ್ತಾರೆ ಎರಡನೆಯದಾಗಿ ಮಾತಾಪಿತರು ಮಕ್ಕಳನ್ನು ತಮ್ಮ ದುಡಿಮೆಯಲ್ಲಿ ಪಾಲುದಾರರಾಗಿಸುತ್ತಾರೆ ಆ ಮೂಲಕ ಕುಟುಂಬದ ಆದಾಯವನ್ನು ಹೆಚ್ಚು ಬಯಸುತ್ತಾರೆ ಅಂದರೆ ಬಡತನದ ಬೇಗೆಯಿಂದ ಹೊರಬರಲು ಪ್ರಯತ್ನಸುತ್ತಾರೆ. ಇಂಥವರು ತಮ್ಮ ಮಕ್ಕಳನ್ನು ಕಲಿಯುವಂತೆ ಹೇಳುವುದಿಲ್ಲ ಏಳನೇ ತರಗತಿ ಕಲಿಯುವುದಕ್ಕಿಂತ ಮುಂಚೆ ಶೇ.೨೫ ರಷ್ಟು ವಿದ್ಯಾರ್ಥಿಗಳು ಶಾಲೆಯನ್ನು ಬಿಡುತ್ತಾರೆ.

ಶಿಕ್ಷಣದ ಬಗೆಗಿನ ಅಜ್ಞಾನವು ಮುಸ್ಲಿಂಮರನ್ನು ತಮ್ಮ ಮಕ್ಕಳಿಗೆ ಆಧುನಿಕ ವಿದ್ಯಾಭ್ಯಾಸವನ್ನು ಕೊಡಿಸುವುದರಿಂದ ದೂರ ಉಳಿಸುತ್ತಿದೆ. ಮುಗ್ಗಟ್ಟಿನ ಕಾರಣಗಳಿಂದಾಗಿ ಬೇಗನೆ ದೊರೆಯುವ ಸವಲತ್ತುಗಳಿಗೆ ಮಾರುಹೋಗುತ್ತಾರೆ. ಮುಸ್ಲಿಮರಲ್ಲಿ ಕಂಡುಬರುವ ಶಿಕ್ಷಣದ ಬಗೆಗಿನ ಈ ವೈರಾಗ್ಯಕ್ಕೆ ಅವರಲ್ಲಿ ಶಿಕ್ಷಿತರು ಮತ್ತು ಅಶಿಕ್ಷಿತರ ನಡುವೆ ಯಾವುದೇ ರೀತಿಯ ಸಂಬಂಧವಿಲ್ಲದಿರುವುದು ಒಂದು ಕಾರಣವಾಗಿದೆ. ಮುಸ್ಲಿಂ ನಾಯಕರ ತಟಸ್ಥನಿಲುವೂ ಭಾರತದಲ್ಲಿ ಮುಸ್ಲಿಂ ಮಹಿಳೆ ಮತ್ತು ಪುರುಷರ ಶೈಕ್ಷಣಿಕ ಅವ್ಯವಸ್ಥೆಗೆ ಕಾರಣವಾಗಿವೆ.

ಭಾರತದಲ್ಲಿ ಮುಸ್ಲಿಮರು ಶೈಕ್ಷಣಿಕವಾಗಿ ಹಿಂದುಳಿಯಲು ಹಲವಾರು ಕಾರಣಗಳು ಹೇಳಬಹುದು ಭೀಕರ ಬಡತನ ಶಿಕ್ಷಣದ ಪ್ರಾಮುಖ್ಯತೆಯ ಬಗೆಗಿನ ಅಜ್ಞಾನ, ಸ್ವಯಂ ಸೇವಾಮನೋಭಾವದ ಕೊರತೆ ಶಿಕ್ಷಣ ಮತ್ತು ಉದ್ಯೋಗವಕಾಶಗಳ ಬಗೆಗೆ ಸಮೂಹದಲ್ಲಿ ತಿಳುವಳಿಕೆ ಹುಟ್ಟದಿರುವುದು ಶಿಕ್ಷಣವು ದುಬಾರಿ ವೆಚ್ಚವುಳ್ಳದ್ದು ಎಂಬ ತಪ್ಪು ತಿಳುವಳಿಕೆ ಪ್ರಚೋದನೆ ಹಗೂ ಪ್ರೋತ್ಸಾಹ ಇಲ್ಲದಿರುವುದು.

ಪ್ರಾಥಮಿಕ ಶಿಕ್ಷಣ ಮುಗಿಸುವ ಮೊದಲೇ ಶಾಲೆಬಿಡುವವರ ಪ್ರಾಮಾಣ ಹೆಚ್ಚಾಗಿದ್ದು ಇದಕ್ಕೆ ಹಲವಾರು ಕಾರಣಗಳಿವೆ.

ಲಿಂಗಾನುಪಾತದ ಕ್ರಮವನ್ನು ಅನುಸರಿಸಿ ಮುಸ್ಲಿಂ ಹುಡುಗರು ಮತ್ತು ಹುಡುಗಿಯರು ಶಾಲೆ ಬಿಡಲು ಕೆಲವು ಕಾರಣಗಳಿವೆ. ಅವುಗಳಲ್ಲಿ ಹುಡುಗರ ಕಾರಣಗಳು ಮತ್ತು ಹುಡುಗಿಯರ ಕಾರಣಗಳು ಭಿನ್ನವಾಗಿವೆ.

ನನ್ನ ಪ್ರಕರಣಗಳ ಅಧ್ಯಯನದಿಂದ ಕೆಲವು ಫಲಿತಾಂಶಗಳು ಈ ರೀತಿಯಾಗಿದ್ದು .

ಕೆಲವು ಕಾರಣಗಳು ಹುಡುಗರ ಮತ್ತು ಹುಡುಗಿಯರ ಕಾರಣಗಳು ಸಾಮ್ಯತೆಯನ್ನು ಪಡೆದುಕೊಂಡಿದ್ದು ಕೆಲವು ಹುಡುಗರ ಕಾರಣಗಳು ಹುಡುಗಿಯರ ಕಾರಣಗಳಿಗಿಂತ ಭಿನ್ನವಾಗಿದೆ.

೧.ಆಯ್ಕೆ ಮಾಡಿಕೊಂಡಂತಹ ಒಟ್ಟು ಪ್ರಕರಣಗಳನ್ನು ಅನುಲಕ್ಷಿಸಲಾಗಿ ಹೆಚ್ಚಿನಸಂಖ್ಯೆಯಲ್ಲಿ ೪ ಮತ್ತು ೫ನೇ ತರಗತಿಯಲ್ಲೆ ಶಾಲೆ ಬಿಟ್ಟಿದ್ದಾರೆ.

೨.ಆಯ್ಕೆ ಮಾಡಿಕೊಂಡಿರುವಂತಹ ಎಲ್ಲಾ ಪ್ರಕರಣಗಳು ಅನುಲಕ್ಷಸಲಾಗಿ ಒಟ್ಟು ಶಾಲಾದಾಖಲಾತಿಯಲ್ಲಿ ಹೆಣ್ಣುಮಕ್ಕಳ ಸಂಖ್ಯೆಯು ಗಂಡುಮಕ್ಕಳ ಸಂಖ್ಯೆಗಿಂತ ಕಡಿಮೆ ಇದೆ. ಅದೇರೀತಿ ಮಧ್ಯದಲ್ಲೆ ಶಾಲೆ ಬಿಟ್ಟಿರುವ ಸಂಖ್ಯೆಯಲ್ಲಿಯುಸಹ ಗಂಡುಮಕ್ಕಳ ಸಂಖ್ಯೆಗಿಂತ ಹೆಣ್ಣುಮಕ್ಕಳ ಸಂಖ್ಯೆಯು ಅಧಿಕ ಕಂಡುಬಂದಿದೆ.

೩.ಕೆಲವು ಪ್ರಕರಣಗಳನ್ನು ಗಮನಿಸಿದಾಗ ಗಂಡುಮಗು ಮುಂಜ್ವೀಯ ಕಾರಣದಿಂದ ಶಾಲೆ ಬಿಟ್ಟಿದ್ದಾನೆ. ಆದರೆ ಇಂದಿನದಿನವಲ್ಲಿ ಎಂತಹವ್ರೂಂದು ಕಾರಣಗಳಿಂದ ಶಾಲೆ ಬಿಡುವುದು ತುಂಬಾವಿರಳ ಏಕೆಂದರೆ ಇದು ಆಧುನಿಕ ಶಸ್ತ್ರಚಿಕಿತ್ಸೆ ಇಂದ ಇಂಥ ಸಮಸ್ಯೆ ತಲೆದೂರವುರುದಿಲ್ಲ ಎಲ್ಲೋ ಒಂದು ಕಾರಣಗಳು ದೊರೆಯುತ್ತದೆ.

೪.ಚಂದುಸಾಬ ಮತ್ತು ಇನ್ನಿತರರ ಪ್ರಕರಣಗಳ ಅಧ್ಯಯವನ್ನು ಗಮನಿಸಿ ಹೇಳುವುದಾದರೆ ಮುಸ್ಲಿಂ ಹುಡುಗರನ್ನು ಹೊರಗಿನ ದುಡಿಮೆಗೆಂದು ಅವರ ತಾಯಿ ತಂದೆಯರು ಶಾಲೆ ಬಿಡಿಸಿದರು. ಅವರ ತಂದೆ ತಾಯಿಯರು ತಮ್ಮ ಹುಡುಗರನ್ನು ತಮ್ಮ ದುಡುಮೆಯಲ್ಲಿ ಪಾಲು ದಾರರಾಗಿಸುತ್ತಾರೆ ಆ ಮೂಲಕ ಕುಟುಂಬದ ಆದಾಯವನ್ನು ಹೆಚ್ಚುಬಯಸುತ್ತಾರೆ. ಹೀಗಾಗಿ ತಮ್ಮ ಮಕ್ಕಳನ್ನು ಕಲಿಯುವಂತೆ ಹೇಳುವುದಿಲ್ಲ ನಾಲ್ಕೋ ಐದನೇ ತರಗತಿಯವರೆಗೆ ಶಾಲೆಗೆ ಕಳುಗಿಸಿಶಾಲೆ ಬೀಡಿಸುವರು.

ಅದೇರೀತಿ ಕೆಲವು ಕಾರಣಗಳು ಹುಡುಗರ ಕಾರಣ ಗಳಿಗಿಂತ ಹುಡುಗಿಯರ ಕಾರಣಗಳು ಭಿನ್ನವಾದ ಕಾರಣಗಳು ಇವೆ. ಅವು ಈರೀತಿ ಗಮನಿಸಬಹುದು.

೧)ಮೈಮುನಳ ಮತ್ತು ಇನ್ನಿತರರ ಕೆಲವು ಪ್ರಕರಣಗಳನ್ನು ಅನುಲಕ್ಷಿಸಿದಾಗ ಇವರ ತಂದೆ ತಾಯಿಯರು ಪ್ರಾಯಕ್ಕೆ ಬಂದ ತಮ್ಮ ಹೆಣ್ಣು ಮಕ್ಕಳು ಹುಡುಗರೊಡನೆ ಬೆರೆಯುದನ್ನು ನಿಷೇಧಿಸುವರು ಅವರೊಂದಿಗೆ ಕೂಡಿ ಓದಬಾರದು ಎಂದು ಶಾಲೆ ಬಿಡಿಸುವರು ಪರ್ದಾ ವ್ಯವಸ್ಥೆಯು ಮುಸ್ಲಿಂ ಹೆಣ್ಣು ಮಕ್ಕಳನ್ನು ಪ್ರತ್ಯೇಕ ವಾಗಿಡುತ್ತದೆ.

ಇನ್ನೂ ಕೆಲವು ಕುಟುಂಬಗಳು ತಮ್ಮ ಹೆಣ್ಣು ಮಕ್ಕಳನ್ನು ಶಾಲೆ ಬಿಡಿಸಿ ಮುದುವೆ ಮಾಡುತ್ತಾರೆ. ಈ ಕಾರಣಕ್ಕಾಗಿ ತಮ್ಮ ಮಕ್ಕಳನ್ನು ಶಾಲೆ ಬಿಡಿಸುತ್ತಾರೆ.

೨)ರಹೀಮಳ ಪ್ರಕರಣವನ್ನು ಅನುಲ್ಷಿಸಿದಾಗ ಇವಳಿಗೆ ಕೇವಲ ಮದರಸಾದಲ್ಲಿ ಮಾತ್ರ ಶಿಕ್ಷಣ ಪಡೆದಿದ್ದಳು ಮುಸ್ಲಿಂ ಧರ್ಮದಲ್ಲಿ ಔಪಚಾರಿಕ ಶಿಕ್ಷಣಕ್ಕಿಂತ ಅನೌಪಚಾರಿಕ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ಕೊಡಲಾಗಿದ್ದು ಈ ಅನೌಪಚಾರಿಕ ಶಿಕ್ಷಣ ಮದರಸಾಗಳ ಮುಖಾಂತರ ಪಡೆಯುತ್ತಿದ್ದರು. ಮುಸ್ಲಿಂ ಕುರಾನಿನ ಪಠಣ ಮಾಡಲೇ ಬೇಕಾಗಿತ್ತು. ಹೀಗಾಗಿ ಮಹಿಳೆಯರಿಗೆ ಶಾಲೆಗೆ ಕಳುಹಿಸುವುದು ವ್ಯರ್ಥ್ಯ ಎಂದು ಶಾಲೆ ಬಿಡಿಸಿ ಕೇವಲ ಮದರಾಸಗಳಲ್ಲಿ ಮಾತ್ರ ಶಿಕ್ಷಣ ಪಡೆದರೆ ಸಾಕು ಎನ್ನುವಂತಹ ನಂಬಿಕೆಯಲ್ಲಿ ಇದ್ದಾರೆ.

೩. ಇನ್ನು ಕೆಲವು ಪ್ರಕರಣಗಳನ್ನು ಗಮನಿಸಿದರೆ ಹುಡುಗಿಯರಿಗೆ ಒಳದುಡಿಮೆಗಳಿಗೆ ಶಾಲೆ ಬಿಡಿಸುವರು ಪುರುಷನಾದವನು ಕೇವಲ ಹೊರಗೆ ದುಡಿದರೆ ಮಹಿಳೆಯಾದವಳು ಮನೆಯಲ್ಲಿ ದುಡಿಯುವಳು ಅಂದರೆ ಅಡುಗೆ ಮಾಡುವುದು ಮಕ್ಕಳನ್ನು ಪಾಲನೆ ಪೋಷಣೆ ಮಾಡುವುದು ಇನ್ನಿತರ ಮನೆಯ ಎಲ್ಲಾ ಕೆಲಸ ಕಾರ್ಯಗಳನ್ನು ಮಹಿಳೆಯರು ನಿಭಾಯಿಸಬೇಕಾಗಿದೆ. ಮಹಿಳೆ ಮನೆಯಲ್ಲಿನ ಕೆಲಸಗಳನ್ನು ನಿಭಾಯಿಸುವುದರ ಜೊತೆಗೆ ಮನೆಯ ಹೊರಗಿನ ಕೆಲಸಗಳನ್ನು ನಿಭಾಯಿಸುವಳು ಉದಾಹರಣೆಗೆ:ಕಳೆ ಕೀಳುವುದು,ಕೂಲಿ ಕೆಲಸ ಮಾಡುವುದು ಇನ್ನಿತರ ಕೆಲಸಗಳನ್ನು ಮಾಡುವಳು. ಅಂದರೆ ಮಹಿಳೆಯು ಇಬ್ಬಗೆಯ ದುಡಿಮೆ ಮಾಡುವಳು ಆದರೆ ಇವಳ ಈ ದುಡಿಮೆಗೆ ಯಾವುದೇ ರೀತಿಯ ಪ್ರಾಮುಖ್ಯತೆ ಇಲ್ಲ.

೪. ಇನ್ನು ಕೆಲವು ಪ್ರಕರಣಗಳಿಂದ ಭಿನ್ನವಾದ ಫಲಿತಾಂಶಗಳನ್ನು ಗಮನಿಸಬಹುದಾಗಿದೆ. ಗ್ರಾಮೀಣ ಪ್ರದೇಶದಲ್ಲಿ ವಾಸವಾಗಿದ್ದಂತಹ ಜನರು ಅಥವಾ ಶಾಲೆಯು ಊರಿಂದ ಹೊರಗೆ ಇದ್ದಸಂದರ್ಭದಲ್ಲಿ ಅವರು ಶಾಲೆ ಕಲಿಯಲು ಸರಕಾರಿ ವಾಹನಗಳಲ್ಲಿಯೇ ಹೋಗ ಬೇಕಾಗುವ ಅನಿರ್ವಾತೆ ಕಂಡು ಬರುತ್ತದೆ. ಒಂದು ಊರಿನಿಂದ ಮತ್ತೊಂದು ಊರಿಗೆ ಹೋಗಿ ಕಲಿಯವುದನ್ನು ಬಹಳಷ್ಟು ಜನರು ವಿರೋಧಿಸುವರು ಅದರಲ್ಲೂ ಮಹಿಳೆಯರು ಒಂದೂ ರಿನಿಂದ ಇನ್ನೊಂದೂರಿಗೆ ಹೋಗಿ ಕಲಿಯುವುದನ್ನು ವಿರೋಧಿಸುವರು ಏಕೆಂದರೆ ಮಹಿಳೆಯರು ತಪ್ಪುದಾರಿಗಿಳಿಯುವರು ಮತ್ತು ಸಮಾಜದಲ್ಲಿ ಹೆಚ್ಚುತ್ತಿರುವಂತಹ ಅತ್ಯಾಚಾರ ಅಪಹರಣಗಳಿಂದ ಅವಳು ಶಾಲೆಗೆ ಹೊಗುವುದೇ ಬೇಡ ಎಂದು ಮಧ್ಯದಲ್ಲೆ ಶಾಲೆ ಬಿಡಿಸುವರು.

೫. ಕೆಲವು ತಂದೆತಾಯಿಯರು ಅಭಿಪ್ರಾಯಿಸಿರುವಂತೆ ಒಂದುವೇಳೆ ಹೆಣ್ಣುಮಕ್ಕಳಿಗೆ ಶಿಕ್ಷಣ ಕೊಟ್ಟರೆ ಅವಳಿಗೆ ತಕ್ಕ ವರ ಹುಡುಕುವುದು ಮುಸ್ಲಿಂರಲ್ಲಿ ತುಂಬಾ ಕಷ್ಟ ಏಕೆಂದರೆ ಶಿಕ್ಷಣ ಪಡೆದ ಪುರುಷರೇ ಕಡಿಮೆ ಹೀಗಾಗಿ ಮಹಿಳೆಯರಿಗೆ ಏಕೆ ಶಿಕ್ಷಣ ಎನ್ನುವ ನಿರ್ಣಯಕ್ಕೆ ಬರುತ್ತಾರೆ.

ಅದೇರೀತಿ ಇನ್ನು ಕೆಲವು ಪ್ರಕರಣಗಳನ್ನು ಅನುಲಕ್ಷಿಸಲಾಗಿ ಕೆಲವು ಫಲಿತಾಂಶಗಳು ಹುಡುಗ ಹುಡುಗಿಯರು ಶಾಲೆ ಬಿಡಲು ಒಂದೇ ಕಾರಣಗಳು ಗಮನಿಸಬಹದು.

೧. ಕೆಲವು ಪ್ರಕರಣಗಳನ್ನು ಗಮನಿಸಿದಾಗ ಮಕ್ಕಳು ಬಡತನದ ಕಾರಣದಿಂದ ಶಾಲೆ ಬಿಡಿಸಿದ್ದಾರೆ. ಭಾರತ ಒಂದು ಬಡರಾಷ್ಟ್ರವಾಗಿದ್ದು ಅದರಲ್ಲಿಯೂ ಮುಸ್ಲಿಂ ಸಮುದಾಯವು ಆರ್ಥಿಕವಾಗಿ ತುಂಬಾ ಹಿಂದುಳಿದಿದ್ದಾರೆ ಇವರಲ್ಲಿ ಬಡತನ ತೀವ್ರವಾಗಿ ತಲೆದೊರಿದೆ ಕೆಲವು ಕುಟುಂಬಗಳಲ್ಲಿ ಒಂದು ಹೊತ್ತುಊಟಕ್ಕೆ ಗತಿ ಇಲ್ಲದ ಸಂದರ್ಭದಲ್ಲಿ ಶಿಕ್ಷಣ ಕೊಡಿಸುವುದು ದೂರದಮಾತು.

ಕೆಲವರಿಗಂತೂ ಶಿಕ್ಷಣವೇ ಕೊಡಿಸುವುದಿಲ್ಲ ಒಂದು ವೇಳೆ ಕೊಡಿಸಿದರೂ ಎರಡೊ ಮೂರೊ ತರಗತಿಯವರೆಗೆ ಶಾಲೆಗೆ ಕಳುಹಿಸಿ ಶಾಲೆ ಬಿಡಿಸುವರು ಅದರಲ್ಲೂ ಹೆಣ್ಣುಮಕ್ಕಳಿಗೆ ಈಗ ಶಾಲೆಯಲ್ಲಿ ಹಲಾವಾರು ಸೌಲಭ್ಯಗಳು ಇದ್ದರೂ ಮನೆಯ ನಿರ್ವಾಹಣೆಯಸಲುವಾಗಿ ಅವರು ಶಾಲೆ ಬಿಡಬೇಕಾಗಿ ಬರುತ್ತದೆ. ಇಂಥ ಉದಾಹರಣೆಗಳು ಬಹಳಷ್ಟು ಪ್ರಕರಣಗಳಿಂದ ಗಮನಿಸಬಹುದಾಗಿದೆ.

೨. ಅದೇರೀತಿ ಕೆಲವು ಪ್ರಕರಣಗಳಿಂದ ತಿಳಿಯುವುದೆಂದರೆ ಮುಸ್ಲಿಂರಲ್ಲಿ ಕೆಲವು ಪೋಷಕರು ಶಿಕ್ಷಣ ಪಡೆಯುವುದು ಕೇವಲ ಉದ್ಯೋಗದ ಸಲುವಾಗಿ ಎನ್ನುವ ನಂಬಿಕೆಯನ್ನು ಹೊಂದಿರುವಂತಹ ಪಾಲಕರು ಇದ್ದಾರೆ. ಆದರೆ ಇಂದಿನ ದಿನದಲ್ಲಿ ಎಷ್ಟು ಓದಿದರೂ ಉದ್ಯೋಗ ಸಿಗುವುದಿಲ್ಲ ಎನ್ನುವ ತಪ್ಪು ನಂಬಿಕೆ ಹೊಂದಿರುವಂತಹ ಪೋಷಕರು ತಮ್ಮ ಮಕ್ಕಳಿಗೆ ಮಧ್ಯದಲ್ಲೇ ಶಾಲೆ ಬಿಡಿಸುವುದು ಕಂಡುಬರುತ್ತದೆ.

೩. ಇನ್ನು ಕೆಲವು ಪ್ರಕರಣಗಳನ್ನು ಗಮನಿಸಿದಾಗ ಪೋಷಕರಿದ್ದರೂ ಸಹ ಪೋಷಕರ ಕಾಳಜಿಯ ಕೊರತೆ ಇರುವುದರಿಂದ ಮಕ್ಕಳು ಶಾಲೆ ಪೂರ್ಣಗೊಳಿಸದೇ ಮಧ್ಯದಲ್ಲೇ ಶಾಲೆ ಬಿಡುವರು. ಪೋಷಕರು ಕಾಳಜಿ ವಹಿಸದಿರಲು ಕಾರಣ ಪೋಷಕರೇ ಅಜ್ಞಾನಿಗಳಾಗಿದ್ದು ಅವರೇ ಶಿಕ್ಷಣದ ಮಹತ್ವ ತಿಳಿದಿರದ ಸಂದರ್ಭದಲ್ಲಿ ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸುವದರಲ್ಲಿ ಆಸಕ್ತಿ ವಹಿಸುವುದಿಲ್ಲ ಅದರಲ್ಲೂ ಹೆಣ್ಣುಮಕ್ಕಳ ಶಿಕ್ಷಣದ ಬಗ್ಗೆ ತೀರ ನಿರಾಸಕ್ತಿ ತೋರಿಸುವರು.

೪. ಕೆಲವು ಪ್ರಕರಣಗಳನ್ನು ಅನುಲಕ್ಷಿಸಿದಾಗ ಅನೇಕ ಮುಸ್ಲಿಮರು ಪ್ರಾಂತಿಯ ಭಾಷೆಗಳಲ್ಲಿ ವ್ಯವಹಾರ ಮಾಡಬಲ್ಲವರಾಗಿದ್ದರೂ ಉರ್ದು ಭಾಷೆಯ ಬಗೆಗೆ ಭಾವನಾತ್ಮಕ ವಾದ ಒಲವಿದೆ. ಉರ್ದು ಮಾಧ್ಯಮದಲ್ಲಿಯೇ ಸೇರಿಸಲು ಮುಂದಾಗುತ್ತಾರೆ. ಆದರೆ ಅನೇಕ ಕಡೆ ಉರ್ದು ಮಾಧ್ಯಮದ ಶಾಲೆಗಳಿಲ್ಲ ಉರ್ದು ಮಾಧ್ಯಮದಲ್ಲೆ ಸೂಕ್ತ ಪಠ್ಯಕ್ರಮವಿಲ್ಲ ಗ್ರಾಮೀಣ ಪ್ರದೇಶದಲ್ಲಿ ಇದ್ದರು ಅದು ಕೇವಲ ೫ನೇ ತರಗತಿಯವರೆಗೆ ಮಾತ್ರವಿರುತ್ತದೆ. ಇಂಥ ಸಂದರ್ಭದಲ್ಲಿ ಅವರು ಶಾಲೆಯನ್ನು ಬಿಡುವರು ಕೆಲವು ತಂದೆ ತಾಯಿಯರು ತಮ್ಮ ಮಕ್ಕಳ ಶಿಕ್ಷಣ ಮುಂದುವರೆಸಲು ಕನ್ನಡ ಮಾಧ್ಯಮದಲ್ಲಿ ಶಾಲೆಗೆ ಸೇರಿಸಲು ಮುಂದಾಗಿಲ್ಲ.

೫. ಕೆಲವು ಮಕ್ಕಳು ದೈಹಿಕ ಆರೋಗ್ಯದ ಕೊರತೆಯಿಂದ ಶಾಲೆ ಬಿಡುವದು ಕಂಡುಬರುತ್ತದೆ. ಅನಾರೋಗ್ಯದಿಂದ ನರಳುವುದು ಬಾಲಕರಿಗಿಂತ ಬಾಲಕಿಯರೇ ಹೆಚ್ಚು ಭಾರತದಲ್ಲಿ ಬಡತನದ ಕಾರಣದಿಂದ ಮಕ್ಕಳಿಗೆ ಅಪೌಷ್ಠಿಕತೆ ಸಮಸ್ಯೆ ತಲೆದೊರುತ್ತದೆ. ಆಹಾರ ಕೊಡುವುದರಲ್ಲೂ ಕೆಲವು ಕುಟುಂಬಗಳಲ್ಲಿ ತಾರತಮ್ಯ ಮಾಡುವರು. ಅಪೌಷ್ಠಿಕತೆಯಿಂದ ಬಹುಬೇಗ ರೋಗರುಜಿನೆಗಳಿಗೆ ತುತ್ತಾಗುತ್ತಾರೆ. ಇದರ ಪರಿಣಾಮ ಧೀರ್ಘಾವಧಿ ಗೈರುಹಾಜರಾಗಿ ಶಾಲೆಬಿಡುವರು.

## ಸಲಹೆಗಳು

"ಪ್ರಾಥಮಿಕ ಶಿಕ್ಷಣದಲ್ಲಿ ಶಾಲೆ ಬಿಡುವಿಕೆ; ಲಿಂಗ ಹಾಗೂ ಧರ್ಮಾಧರಿತ ವಿಶ್ಲೇಷಣೆ" ಎಂಬ ವಿಷಯದ ಮೇಲೆ ಕ್ಷೇತ್ರ ಕಾರ್ಯ ಕೈಗೊಂಡಾಗ ಪ್ರಾಥಮಿಕ ಹಂತದಲ್ಲಿ ಮಕ್ಕಳು ಯಾವಯಾವ ಕಾರಣಗಳಿಂದ ಶಾಲೆ ಬಿಡುತ್ತಾರೆ ಹುಡುಗರಿಗಿಂತ ಹುಡುಗಿಯರ ಕೆಲವು ಕಾರಣಗಳು ಭಿನ್ನವಾಗಿದರೆ ಹುಡುಗರ ಕಾರಣಗಳು ಸಹ ಹುಡುಗಿಯರಿಗಿಂತ ಕೆಲವು ಭಿನ್ನವಾದ ಕಾರಣಗಳಿಂದ ಶಾಲೆ ಬಿಡುವುದು ಕಂಡುಬರುತ್ತದೆ. ಈ ರೀತಿ ಮಕ್ಕಳು ಶಾಲೆ ಬಿಡಬಾರದೆಂದು ಅಥವ ಪ್ರತಿದಿನ ಮಕ್ಕಳು ಶಾಲೆಗೆ ಬರಲು ಈ ಕೆಳಗಿನ ಸಲಗೆಗಳನ್ನು ನೀಡಲು ಇಚ್ಛಿಸುತ್ತೇನೆ.

೧. ಶಿಕ್ಷಣ ಎಲ್ಲರಿಗಾಗಿ ಎಂಬ ಗುರಿಯನ್ನು ಹೊಂದಲಾಗಿದೆ. ಈ ಗುರಿಯನ್ನು ಸಾಧಿಸಲು ಜನರಲ್ಲಿ ತಿಳುವಳಿಕೆ ಮೂಡಿಸುವ ಕಾರ್ಯಕ್ರಮಗಳು ತೀವ್ರಗೊಳ್ಳಬೇಕಾದ ಅಗತ್ಯವಿದೆ.

೨. ಪ್ರಾಥಮಿಕ ಶಿಕ್ಷಣ ಸಾರ್ವತ್ರಿಕರಣದ ಗುರಿಯನ್ನು ತಲುಪಲು ಸೂಕ್ಷ್ಮ ಯೋಜನೆ ಕಾರ್ಯಕ್ರಮಗಳನ್ನು ಎಲ್ಲಾ ಗ್ರಾಮಗಳಲ್ಲಿಯೂ ಕಡ್ಡಾಯವಾಗಿ ಹಮ್ಮಿಕೊಳ್ಳುವ ಅಗತ್ಯವಿದೆ. ಈ ಮೂಲಕ ಸಮುದಾಯವನ್ನು ತೊಡಗಿಸಿ ಕೊಂಡು ಶಾಲಾ ಶಿಕ್ಷಣದ ಅಭಿವೃದ್ಧಿಗೆ ಪ್ರಯತ್ನ ಪಡೆಬಹುದಾಗಿದೆ.

೩. ಸ್ಥಳಿಯ ಸಂಘ ಸಂಸ್ಥೆಗಳು ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣಕ್ಕೆ ಹೆಚ್ಚಿನ ಬೆಂಬಲ ನೀಡುವ ಅಗತ್ಯವಿದೆ.

೪. ಮತ ನಿರಪೇಕ್ಷ ಶಿಕ್ಷಣ ಹಾಗೂ ಕೋಮು ಸೌಹಾರ್ದತ ಭಾವನೆಗಳನ್ನು ವ್ಯಾಪಕವಾಗಿ ಪ್ರಚಾರಗೊಳಿಸಬೇಕು.

೫. ಮುಸ್ಲಿಂರಲ್ಲಿರುವ ಬಡತನ, ಮೂಢನಂಬಿಕೆ, ಅಜ್ಞಾನ, ಅನಾರೋಗ್ಯ ಹಾಗೂ ಅನಕ್ಷತೆಯ ನಿವಾರಣೆಗೆ ಮತ ನಿರಪೇಕ್ಷ ಶಿಕ್ಷಣವೊಂದರಿಂದಲೇ ದಾರಿ ಎಂಬುದನ್ನು

ಮನವರಿಕೆ ಮಾಡಿ ಕೊಡಬೇಕು.

೬. ನಮ್ಮ ದೇಶದಲ್ಲಿ ಮಧ್ಯಾಹ್ನದ ಊಟದ ಯೋಜನೆ ಇದ್ದರೂ ಅದು, ನಿರೀಕ್ಷಿತ ಫಲಿತಾಂಶ ಕಾಣುತ್ತಿಲ್ಲ ಈ ಯೋಜನೆ ಇನ್ನು ಸಂಘಟನೆಯೊಂದಿಗೆ ಪ್ರಾರಂಭಿಸಬೇಕು. ಆಹಾರವು ಕೇವಲ ಹಸಿವು ನೀಗಿಸಲು ಮಾತ್ರವಲ್ಲದೇ ದೈಹಿಕ ವಿಕಾಸಕ್ಕೆ ಸಹಾಯವಾಗಿರಬೇಕು.

೭. ಪ್ರತಿ ಮಗುವು ಸಹ ತನ್ನದೇ ಆದ ಕಲಿಕೆಯ ವೇಗವನ್ನು ಹೊಂದಿರುತ್ತದೆ. ಅನೇಕ ಸಂದರ್ಭದಲ್ಲಿ ಶಿಕ್ಷಕರು ಮಕ್ಕಳನ್ನು ಸೋಮಾರಿಗಳು ಮತ್ತು ಪೈಗಳ್ಳರೆಂದು ಬೈಯುವರು ಹೀಗಾಗಿ ಮಕ್ಕಳು ಶಾಲೆ ಬಿಡುವ ಸಾಧ್ಯತೆ ಇರುತ್ತದೆ. ಹೀಗೆ ಇಂಥವರಿಗೆ ವಿಶೇಷವಾದ ಗಮನವನ್ನು ಇಡಬೇಕಾಗುತ್ತದೆ.

೮.ಲಿಂಗಾಧರಿತ ತಾರತಮ್ಯವನ್ನು ನಿವಾರಣೆ ಮಾಡಿ ಲಿಂಗ ಸಮಾನತೆಯನ್ನು ತರುವಲ್ಲಿ ಪ್ರತಿಯೊಬ್ಬರೂ ಆಸಕ್ತಿ ವಹಿಸಬೇಕು ಅಂದಾಗ ಮಾತ್ರ ಮಹಿಳೆಯರ ಸ್ಥಿತಿ ಸುಧಾರಿಸುತ್ತದೆ.

೯. ಹೆಣ್ಣುಮಕ್ಕಳ ಶಿಕ್ಷಣದಲ್ಲಿರುವ ಅಡ್ಡಿಆತಂಕಗಳನ್ನು ನಿವಾರಿಸುತ್ತಾ ಹೆಣ್ಣುಮಕ್ಕಳ ಶಿಕ್ಷಣವನ್ನು ಪ್ರೋತ್ಸಾಹಿಸಬೇಕು.

೧೦. ಮುಸ್ಲಿಂ ಧರ್ಮದಲ್ಲಿ ಬಹಳಷ್ಟುಜನ ಹೆಣ್ಣುಮಕ್ಕಳಿಗೆ ಕೇವಲ ಅನೌಪಚಾರಿಕ ಶಿಕ್ಷಣವನ್ನು ಮಾತ್ರ ಕೊಡುತ್ತಿದ್ದರು ಹೀಗಾಗಿ ಔಪಚಾರಿಕ ಶಿಕ್ಷಣವನ್ನು ಪಡೆಯುವಂತೆ ಎಲ್ಲರಿಗೂ ಪ್ರೋತ್ಸಾಹಿಸಬೇಕು.

೧೧. ಪ್ರತಿಯೊಂದು ಕುಟುಂಬದಲ್ಲಿ ಮಹಿಳೆ ಮತ್ತು ಪುರುಷರಿಗೆ ಸರಿಸಮಾನವಾದ ಶಿಕ್ಷಣವನ್ನು ಒದಗಿಸುವಂತೆ ಅವರಲ್ಲಿ ತಿಳುವಳಿಕೆ ಮೂಡಿಸಬೇಕು. ಅದೇರೀತಿ ಮಹಿಳೆಗೆ ಶಿಕ್ಷಣದ ಜೊತೆಗೆ ಕುಟುಂಬದಲ್ಲಿನ ತಾರತಮ್ಯವು ನಿವಾವರಣೆ ಮಾಡಬೇಕು.

ಈ ಮೇಲಿನ ಪ್ರಮುಖ ಸಲಹೆಗಳನ್ನು ಅನುಷ್ಠಾನಗೊಳಿಸಿದಲ್ಲಿ ಮಕ್ಕಳು ಶಾಲೆಬಿಡುವ ಸಮಸ್ಯೆಗಳು ನಿವಾರಿಸಬಹುದು ಅದೇರೀತಿ ಶಿಕ್ಷಣದಲ್ಲಿ ಲಿಂಗ ಸಮಾನತೆಯನ್ನು ನಿವಾರಿಸಬಹುದು.

## ಉಪಸಂಹಾರ

ಇಸ್ಲಾಂ ಧರ್ಮ ಹೊಂದಿರುವ ದೃಷ್ಟಿಕೋನ ಪುರುಷ ಕೇಂದ್ರಿಕೃತವಾಗಿದೆ. ಮಹಿಳೆಯ ದೇಹದ ಕುರಿತು ಕಟ್ಟಿ ಕೊಟ್ಟ ಗ್ರಹಿಕೆಗಳು ಅವಳನ್ನು ಎರಡನೆ ದರ್ಜೆ ಪ್ರಜೆಯನ್ನಾಗಿಸಿದೆ.

ಒಂದು ದೇಶದ ನಿಜವಾದ ಸಂಪತ್ತು ಎಂದರೆ ಇಲ್ಲಿರುವ ಬುದ್ಧಿ ಜೀವಿಗಳು ಭಾರತದಲ್ಲಿ ಶಿಕ್ಷಣವು ಎಲ್ಲಾ ವರ್ಗಗಳಿಗೂ ಎಲ್ಲಾರಿಗೂ ಉಚಿತ ಹಾಗೂ ಕಡ್ಡಾಯವಾಗಿ ಕೊಡುವ ಧ್ಯೇಯೋದ್ದೇಶವು ಸಂವಿಧಾನ ಹೊಂದಿದೆ. ಹಿಂದೆ ಶಿಕ್ಷಣವು ಕೆಲವೇ ವರ್ಗದವರಿಗೆ ಮಾತ್ರ ಸೀಮಿತ

ವಾಗಿತ್ತು ಮಹಿಳೆಯರಿಗೂ ಮತ್ತು ಕೆಳ ಸಮುದಾಯದ ಜನರು ಶಿಕ್ಷಣದಿಂದ ದೂರವೇ ಉಳಿದಿದ್ದರು ಆದರೆ ಕೆಲವು ಉನ್ನತ ವರ್ಗದ ಮಹಿಳೆಯರಿಗೆ ಮಾತ್ರ ಶಿಕ್ಷಣ ಕೊಡುತ್ತಿದರು. ಶಿಕ್ಷಣವು ಪ್ರತಿಯೊಬ್ಬ ವ್ಯಕ್ತಿಗೂ ಅತಿ ಅವಶ್ಯಕವಾಗಿಬೇಕು ಸ್ತ್ರೀಯರು ಶಿಕ್ಷಣ ಪಡೆಯುವುದರ ಮೂಲಕ ತನ್ನ ಮೇಲಿನ ವಿವಿಧ ಸಮಸ್ಯೆಗಳು ಮತ್ತು ಶೋಷಣೆಗಳ ಬಗ್ಗೆ ಹಾಗೂ ಸಮಾಜಿಕ ನೈಸರ್ಗಿಕ ಹಕ್ಕುಗಳ ಬಗ್ಗೆ ಧ್ವನಿ ಎತ್ತಲು ಶಿಕ್ಷಣವು ಸಹಾಯಕವಾಗುತ್ತದೆ.

ಸ್ವತಂತ್ರ ಪೂರ್ವದಲ್ಲಿ ಮುಸ್ಲಿಂ ಮಹಿಳೆಯರಿಗೆ ಶಿಕ್ಷಣ ಎಂಬುದು ಕನಸಿನ ಮಾತೇ ಆಗಿತ್ತು ಆದರೆ ಕೆಲವು ಉನ್ನತ ಸ್ಥರದ ಮುಸ್ಲಿಂ ಮಹಿಳೆಯರಿಗೆ ಸಿಮಿತ ಚೌಕಟ್ಟಿನಲ್ಲಿ ಶಿಕ್ಷಣವನ್ನು ನೀಡಲಾಗುತ್ತಿತ್ತು ಅದು ಸಹ ಕೇವಲ ಕುರಾನನ್ನು ಪಠಿಸುವುದು ಅದರಲ್ಲೂ ಕೆಳ ವರ್ಗದ ಮುಸ್ಲಿಂ ಮಹಿಳೆಯರಿಗೆ ಇದು ಸಹ ಸಿಗುತ್ತಿರಲಿಲ್ಲ.

ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡುವುದೇ ವ್ಯರ್ಥ ಏಕೆಂದರೆ ಅವರು ಹೇಗಿದ್ದರೂ ಕುಟುಂಬಕ್ಕೆ ಆದಾಯ ತರುವುದಿಲ್ಲ ಎಂಬ ಯೋಚನೆ ಭಾರತೀಯ ಕುಟುಂಬದ ಮನಸ್ಸುಗಳಲ್ಲಿ ಆಳವಾಗಿ ಬೇರೂರಿದೆ. ಎಲ್ಲಾರಿಗೂ ಉಚಿತ ಶಿಕ್ಷಣವನ್ನು ನೀಡಲು ಸಕಾರ ಅಭಿವೃದ್ಧಿ ಯೋಜನೆಗಳನ್ನು ರೂಪಿಸಿದ್ದರೂ ಪ್ರಸ್ತುತ ಶಿಕ್ಷಣ ವ್ಯವಸ್ಥೆಯು ಅವರಲ್ಲಿ ಆತ್ಮಗೌರವ ಅಥವಾ ಸ್ವಾವಲಂಬನೆ ಮೂಡಿಸುವ ಮೌಲ್ಯಗಳನ್ನು ಒಳಗೊಂಡಿಲ್ಲ ಶಿಕ್ಷಣ ಪಡಿಯುವದರಲ್ಲಿ ಮೊದಲನೆ ಆಧ್ಯತೆಯನ್ನು ಮಗನಿಗೆ ಕೊಡಲಾಗಿದೆ. ಪ್ರಾಥಮಿಕ ಶಿಕ್ಷಣ ಕಷ್ಟ ಪಟ್ಟು ಮುಗಿಸಿದರು ಮೂಧ್ಯಮಿಕ ಉನ್ನತ ಶಿಕ್ಷಣ ತಲುಪಲು ಸ್ತ್ರೀ- ಪುರುಷರ ನಡುವೆ ತಾರತಮ್ಯ ಹೆಚ್ಚು ಕಂಡುಬರುತ್ತದೆ.

ಪ್ರಾಥಮಿಕ ಶಾಲಾ ದಾಖಲಾತಿಯ ಅಂಕಿ ಅಂಶಗಳನ್ನು ಗಮನಿಸಿದರೆ ಹುಡುಗಿಯರ ದಾಖಲಾತಿ ಶೇ. ೭೮ ಇದ್ದರೆ ಹುಡುಗರ ದಾಖಲಾತಿ ಶೇ. ೧೦೦ ರಷ್ಟಿದೆ. ಹಲವಾರು ಕಾರಣಗಳಿಂದ ಶಾಲೆ ತೊರೆಯುವುದು ಕಂಡುಬರುತ್ತಿದೆ ಬಡತನ ಅಜ್ಞಾನ ಮತ್ತು ಮೂಢನಂಬಿಕೆ ಸಾರಿಗೆ ಸಂಪರ್ಕದ ಕೊರತೆ ಮಹಿಳೆಯರ ಮೇಲೆ ಹೇರುವಂತಹ ಕೆಲವು ಸಮಾಜಿಕ ನಿರ್ಭಂಧನೆಗಳು ಅಂದರೆ ಋತುಮತಿಯಾದರೆ ಹೆಚ್ಚು ಓದಿದ ವಧುವಿಗೆ ಅವಳಿಗೆ ತಕ್ಕ ವರ ಸಿಗುವುದಿಲ್ಲ ಎಂಬ ಧೋರಣೆ ಉದ್ಯೋಗ ಸಿಗುವುದಿಲ್ಲ ಎಂದು ಈ ಎಲ್ಲಾ ಕಾರಣಗಳಿಂದ ಶಾಲೆ ಬಿಡುವರು. ಮಹಿಳೆ ಮತ್ತು ಪುರುಷರು ಕಡ್ಡಾಯವಾಗಿ ಎಲ್ಲಾರು ಶಾಲೆಗೆ ಬರುವಂತೆ ಸರಕಾರ ಹಲವಾರು ಕಾರ್ಯಕ್ರಮಗಳನ್ನು

ಹಾಕಿಕೊಂಡಿದೆ ಆದರೂ ಶಾಲೆ ಬಿಡುವುದು ಕಂಡುಬರುತ್ತದೆ ಅದರಲ್ಲೂ ಶಾಲೆಯಿಂದ ಹೊರಬೀಳುವ ಹೆಣ್ಣು ಮಕ್ಕಳ ಸಂಖ್ಯೆ ಹೆಚ್ಚಾಗಲು ಕಾರಣಗಳನ್ನು ಗಮನಿಸಿದಾಗ ಅವರು ಮನೆಯ ಹೊರಗೆ ಮತ್ತು ಮನೆಯೊಳಗೂ ದುಡಿಯಬೇಕಾಗಿದೆ. ಅದೇರಿತಿ ಬಾಲ್ಯವಿವಾಹಗಳಿಂದಲೂ ಶಾಲೆ ಬಿಡಿಸುವರು.

ಇಂದು ಮುಸ್ಲಿಂ ಮಹಿಳೆಯರ ಶಿಕ್ಷಣದಲ್ಲಿ ಹಲವಾರು ಬದಲಾವಣೆಗಳನ್ನು ಮಾಡಬೇಕಾಗಿದೆ ಮಹಿಳೆಯರಿಗೆ ಓದಲು ಅವಕಾಶಗಳನ್ನು ದೊರಕಿಸಿಕೊಡುವದರ ಜೊತೆಗೆ ಅವರ ಶಿಕ್ಷಣ ಅರ್ಥಪೂರ್ಣವಾಗಿ ಪೂರ್ಣಗೊಳಿಸುವಂತಹುದಾಗಬೇಕು.

ಮಹಿಳೆಯರಿಗೆ ಕೊಡುವ ಶಿಕ್ಷಣವು ಸಮಾಜಿಕ ಅಧೀನತೆಯ ಎಲ್ಲಾ ರೂಪಗಳನ್ನು ಪ್ರಶ್ನಿಸುವಂತಹುದಾಗಿರಬೇಕು. ಇಂದು ಮಹಿಳೆಯರು ಬದುಕುತ್ತಿರುವ ಶಿಕ್ಷಣ ವ್ಯವಸ್ಥೆಯ ಲಿಂಗ ಸೂಕ್ಷ್ಮತೆಯ ಬಗ್ಗೆ ಅಧಿಕಾರ ರಚನೆಗಳ ಬಗ್ಗೆ ವಿಮರ್ಶಾತ್ಮಕವಾಗಿ ಕೆಲಸಮಾಡಬೇಕಾಗಿದೆ. ಕೇವಲ ಶಿಕ್ಷಣ ಸಂಸ್ಥೆಗಳನ್ನು ಎದುರಿಸುವದರಿಂದ ಸಮಸ್ಯೆ ಬಗೆ ಹರಿಯುವದಿಲ್ಲ ಆದರೆ ಇಂತಹ ಶಿಕ್ಷಣ ವ್ಯವಸ್ಥೆಗೆ ಕಾರಣವಾದ ಸಮಾಜಿಕ ವ್ಯವಸ್ಥೆಯಲ್ಲಿಯೇ ಕ್ರಾಂತಿಕಾರಕ ಬದಲಾವಣೆಯನ್ನುಂಟು ಮಾಡುವುದು ಅಗತ್ಯವಾಗಿದೆ. ಇದು ಜನಪರವಾದ ಪ್ರಜಾ ಸತ್ತಾತ್ಮಕ ಚಳುವಳಿಯಿಂದ ಮಾತ್ರ ಸಾಧ್ಯ ಅಂತಹ ಚುಳುವಳಿಯಲ್ಲಿ ಮಹಿಳೆಯರು ಪ್ರಮುಖ ಪಾತ್ರ ವಹಿಸಬೇಕು.

ಶಿಕ್ಷವೆಂಬುವುದು ಕೇವಲ ನಾಲ್ಕು ಗೋಡೆಗಳ ಮಧ್ಯೆ ಇರುವಂತಹದಲ್ಲ ಅದು ದಿನ ಪೂರ್ತಿ ಹಾಗೆಯೇ ನಿರಂತರವಾದುದು ಶಿಕ್ಷಣ ಎಂದರೆ ಕೇವಲ ಸಹಿ ಮಾಡುವದು ಓದುವದು, ಬರೆಯುವುದು ಮಾತ್ರವಲ್ಲಮಾಹಿತಿ ತುಂಬಿದ ಹೊಸ ಆಲೋಚನೆ ಪ್ರಪಂಚಕ್ಕೆ ಪ್ರವೇಶ ಮಾಡುವದರಲ್ಲಿ ಪಠ್ಯಪುಸ್ತಕ ಪತ್ರಿಕೆ ಪ್ರಕಟ ಮಾಡಲು ಸರ್ಕಾರದ ಧೃಡಸಂಕಲ್ಪವನ್ನು ಹೊಂದಬೇಕು ಇದರಿಂದ ಜೀವನ ಮಟ್ಟದ ಸುಧಾರಣೆ ವ್ಯಕ್ತಿತ್ವದ ವಿಕಾಸ ಆತ್ಮವಿಶ್ವಾಸ ಬೆಳೆಸಲು ಸಹಕರಿಸುವಂತಾಗುತ್ತದೆ.

ಮುಸ್ಲಿಂ ಸ್ತ್ರೀ ಮತ್ತು ಪುರುಷರಲ್ಲಿನ ಶಾರೀರಿಕ ವ್ಯತ್ಯಾಸದ ಬದಲಿಗೆ ಮೌಲ್ಯ ಮಾನ್ಯತೆಯಲ್ಲಿನ ವ್ಯತ್ಯಾಸವನ್ನು ಸೂಕ್ಷ್ಮವಾಗಿ ಅರ್ಥೈಸಲು ಸಾಧ್ಯವಾಗುವ ಕ್ರಿಯೆಗೆ ಮುಂದಾಗಬೇಕು. ಸ್ತ್ರೀ ಬ್ರೂಣಹತ್ಯೆ, ಬಾಲ್ಯವಿವಾಹ, ಬಹುಪತ್ನಿತ್ವ, ಲೈಂಗಿಕ ಶೋಷಣೆ ವಿಧವೆ ವಿವಾಹ ಸಮಸ್ಯೆ, ಪರದಾ ಪದ್ಧತಿ ಉದ್ಯೋಗ ಶಿಕ್ಷಣದಲ್ಲಿ ಅವಕಾಶ ವಂಚನೆ ಲಿಂಗಾಧಾರಿತವಾಗಿ ಹೇರಲ್ಪಟ್ಟ ಪಾತ್ರನಿರ್ವಹಣೆ

ಕುಟುಂಬದ ಹೊಣೆಗಾರಿಕೆಯಿಂದ ಆಚೆಬರಲು ಶಿಕ್ಷಣವನ್ನು ಮೂಲಭೂತ ಹಕ್ಕಾಗಿ ಪಡೆದಾಗ ಮಾತ್ರ ಈ ಎಲ್ಲಾ ಚರ್ಚೆಗಳಿಗೆ ಅರ್ಥಬರುತ್ತದೆ.

ಮುಸ್ಲಿಂ ಮಹಿಳೆಯರ ಶಿಕ್ಷಣವನ್ನು ಪ್ರೋತ್ಸಾಹಿಸಲು ಹಲವಾರು ಕಾನೂನುಗಳು ಜಾರಿಯಲ್ಲಿ ಇದ್ದರೂ ಅವುಗಳು ಕಾರ್ಯಗತವಾಗುವ ರೀತಿಯಲ್ಲಿ ಮಾಡಬೇಕು. ಇನ್ನು ಹೆಚ್ಚು ಹೆಚ್ಚು ಕಾರ್ಯಕ್ರಮಗಳು ಬರಬೇಕು. ಮೊಟ್ಟಮೊದಲು ಮುಸ್ಲಿಮರಲ್ಲಿ ಪ್ರಬಲವಾಗಿ ಬೇರೂರಿದ ಪುರುಷ ಪ್ರಧಾನ ವ್ಯವಸ್ಥೆ ನಿರ್ಮೂಲನೆಯಾಗದ ಹೊರತು ಮಹಿಳೆಯು ದೌರ್ಜನ್ಯದಿಂದ ಮುಕ್ತವಾಗಲು ಸಾಧ್ಯವಿಲ್ಲ ಅದೇರೀತಿ ಅವಳು ಶಿಕ್ಷಣದ ಜೊತೆಗೆ ಇತರ ಸೌಲಭ್ಯ ಪಡೆಯುವದರಲ್ಲಿ ವಂಚಿತಳಾಗುವಳು ಪ್ರತಿಯೊಬ್ಬ ಮಹಿಳೆ ಮತ್ತು ಪುರುಷರಿಗೆ ಪ್ರಾಥಮಿಕ ಶಿಕ್ಷಣವನ್ನು ಕೊಡಿಸಲು ದೇಶವನ್ನು, ಸಮಾಜವನ್ನು ಭದ್ರವಾಗಿ ಕಟ್ಟಲು ಸಾಧ್ಯವಾಗುವುದಿಲ್ಲ ಏಕೆಂದರೆ ಇದು ಬುನಾದಿ ಶಿಕ್ಷಣ. ಒಂದು ವೇಳೆ ಬುನಾದಿಯೇ ಸರಿಯಾಗಿ ಇಲ್ಲದಿದ್ದರೆ ಕಟ್ಟಡವು ಕುಸಿಯುತ್ತದೆ.

ಹೀಗಾಗಿ ಪ್ರತಿಯೊಬ್ಬರು ಜಾತಿ, ವರ್ಗ, ವರ್ಣ, ಧರ್ಮ ಬೇಧಭಾವ ಮಾಡದೆ ೧೪ ವರ್ಷದ ಒಳಗಿನ ಪ್ರತಿಯೊಬ್ಬ ಹುಡುಗ ಹುಡುಗಿಯರು ಪ್ರಾಥಮಿಕ ಶಿಕ್ಷಣವನ್ನು ಪಡೆಯಲೇಬೇಕು ಮತ್ತು ಪಡೆಯುವಂತೆ ಅವರಲ್ಲಿ ಆಸಕ್ತಿ ಹುಟ್ಟಿಸಬೇಕಾದುದು ಪ್ರತಿಯೊಬ್ಬ ಸುಶಿಕ್ಷಿತರ ಕೆಲಸವಾಗಿದೆ.

ಮಕ್ಕಳು ಶಾಲೆ ಬಿಡದ ಹಾಗೆ ಸರ್ಕಾರ ಹಲವಾರು ಸೌಲಭ್ಯಗಳು ಕೊಟ್ಟರೂ ಸಹ ಇನ್ನೂ ಶಾಲೆ ಬಿಡುವವರ ಪ್ರಮಾಣ ಕಂಡುಬರುತ್ತಿದೆ ಅದರಲ್ಲೂ ಮಹಿಳೆಯರೇ ಹೆಚ್ಚಿನ ಪ್ರಮಾಣದಲ್ಲಿ ಶಾಲೆ ಬಿಡುವರು ೯ನೇಯ ಪಂಚವಾರ್ಷಿ ಯೋಜನೆಯಲ್ಲಿ ವಿಶೇಷವಾಗಿ ಮುಸ್ಲಿಂ ಮಹಿಳೆಯರಿಗೆ ಶಾಲೆಗೆ ಬರುವಂತೆ ಹಲವಾರು ಕಾರ್ಯಕ್ರಮಗಳು ಹಾಕಿಕೊಳ್ಳಲಾಗಿತ್ತು ಆದರೂ ಸಹ ಹೆಣ್ಣು ಮಕ್ಕಳು ಶಾಲೆ ಬಿಡುವ ಪ್ರಮಾಣ ಹೆಚ್ಚಾಗಿದೆ.

ಹೀಗಾಗಿ ಕೊಡುವ ಸೌಲಭ್ಯಗಳನ್ನು ಮರು ಪರಿಶೀಲನೆ ಮಾಡಬೇಕಾದ ಅವಶ್ಯಕತೆ ಇದೆ. ಎಲ್ಲಿ ಸಮಸ್ಯೆ ಇದೆ ಎಂಬುದನ್ನು ಅರಿಯಬೇಕಾಗಿದೆ. ಕೊಡುವ ಸೌಲಭ್ಯ ಏನಾದರೂ ಬದಲಾವಣೆ ಆಗಬೇಕೋ ಹೇಗೆ, ಅಥವ ಆ ಕಾರ್ಯಕ್ರಮಗಳು ಕಾರ್ಯಗತವಾಗುವಲ್ಲಿ ಸಮಸ್ಯೆ ಇದೆಯೋ ಅಥವಾ ಕಾರ್ಯಗತಗೊಳಿಸುವಲ್ಲಿ ಹೊಸ ವಿಷಯ ಅಳವಡಿಸಬೇಕೆನ್ನುವುದು ಪರಿಶೀಲಿಸುವದು ಅಗತ್ಯ ವಾಗಿದೆ.

ಈ ಪರಿಶೀಲನ ಕಾರ್ಯಕ್ರಮದಲ್ಲಿ ಎಲ್ಲಾ ಸುಶಿಕ್ಷಿತರು ಆಸಕ್ತಿವಹಿಸಿ ಪಾಲ್ಗೊಂಡು ಮಾಡುವುದು ಅವಶ್ಯಕವಾಗಿದೆ ಅಂದಾಗ ಈ ಸಮಸ್ಯೆ ಸ್ವಲ್ಪ ಮಟ್ಟಿಗೆ ನಿಯಂತ್ರಿಸ ಬಹುದು.

# ವಕ್ತೃಗಳ ವಿವರ

| ಕ್ರ. ಸಂ. | ವ್ಯಕ್ತಿ ಹೆಸರು | ವಯಸ್ಸು | ಲಿಂಗ | ಶಿಕ್ಷಣ | ಸ್ಥಳ (ಗಂಗಾವತಿ) |
|---|---|---|---|---|---|
| ೧ | ಖಾಜಾಹುಸೇನ | ೧೩ | ಗಂಡು | ೫ | ಮರಳಿ |
| ೨. | ರಾಜಾಸಾಬ | ೧೧ | ಗಂಡು | ೫ | ಮರಳಿ |
| ೩. | ರಾಜಾಹುಸೇನ | ೧೩ | ಗಂಡು | ೩ | ಮುಜವರಕ್ಯಾಂಪ್ |
| ೪. | ಬಾನುಬೇಗಂ | ೧೧ | ಹೆಣ್ಣು | ೫ | ಮುಜವರಕ್ಯಾಂಪ್ |
| ೫. | ಪತಿಮಾ | ೯ | ಹೆಣ್ಣು | ೪ | ಮುಜಾವರಕ್ಯಾಂಪ್ |
| ೬. | ಹುಸೇನ ಬಾಷಾ | ೧೨ | ಗಂಡು | ೩ | ಮುಜಾವರಕ್ಯಾಂಪ |
| ೭. | ಫಕ್ರುದ್ದೀನ | ೧೦ | ಗಂಡು | ೪ | ಗುಂಡಮಕ್ಯಾಂಪ್ |
| ೮. | ಚಾಂದ ಪಾಷ | ೧೧ | ಗಂಡು | ೪ | ಗುಂಡಮಕ್ಯಾಂಪ |
| ೯. | ಹೀನಾ | ೭ | ಹೆಣ್ಣು | ೨ | ಗುಂಡಮಕ್ಯಾಂಪ್ |
| ೧೦. | ಮಹ್ಮದ ರಷಿ | ೯ | ಗಂಡು | ೩ | ಗುಂಡಮ್ಮಕ್ಯಾಂಪ್ |
| ೧೧. | ಮಹ್ಮದ | ೧೨ | ಗಂಡು | ೫ | ಗುಂಡಂಮಕ್ಯಾಪ |
| ೧೨. | ಮೈಮುನ | ೧೪ | ಹೆಣ್ಣು | ೭ | ಹಿರಿಜನಂತಕಲ್ |
| ೧೩ | ಖಾದರಬಾಷ | ೧೨ | ಗಂಡು | ೪ | ಊಪ್ಪಿನಮಳಿಕ್ಯಾಂಪ |
| ೧೪. | ಚಂದೂಸಾಬ | ೧೫ | ಗಂಡು | ೭ | ಹೊಸಳ್ಳಿ |
| ೧೫. | ಮಾಲನ | ೧೦ | ಹೆಣ್ಣು | ೫ | ಹೊಸಳ್ಳಿ |
| ೧೬. | ನೂರಮಹ್ಮದ | ೮ | ಗಂಡು | ೨ | ಮಹೆಬೂಬನಗರ |
| ೧೭. | ಹಾಜರಾಬಿ | ೧೩ | ಹೆಣ್ಣು | ೬ | ಹೊಸಳ್ಳಿ |
| ೧೮. | ಆಫ್ರಿನ | ೭ | ಹೆಣ್ಣು | ೨ | ಮಹೆಬೂಬನಗರ |
| ೧೯. | ಸದ್ದಾಂಹುಸೇನ | ೯ | ಗಂಡು | ೨ | ಇಸ್ಲಾಂಪೂರ |
| ೨೦. | ಮೆಹೆರಾಜಪಾಷ | ೧೨ | ಗಂಡು | ೫ | ಇಸ್ಲಾಂಪೂರ |
| ೨೧. | ರೇಷ್ಮಾ | ೧೧ | ಹೆಣ್ಣು | ೪ | ಇಸ್ಲಾಂಪೂರ |
| ೨೨. | ಮಹೇಬೂಬಸಾಬ | ೧೧ | ಗಂಡು | ೩ | ಹೇರೂರ |
| ೨೩ | ತಾಸಿನ | ೮ | ಹೆಣ್ಣು | ೨ | ಸಂಗಾಪೂರ |
| ೨೪. | ಬೀಬಿಜಾನ | ೨೭ | ಹೆಣ್ಣು | ೫ | ಮುರಾಹರಿಕ್ಯಾಂಪ |
| ೨೫. | ಆಷ | ೧೮ | ಹೆಣ್ಣು | ೭ | ಗಂಗಾವತಿ |
| ೨೬. | ರಹಿಮಾ | ೧೮ | ಹೆಣ್ಣು | ಇಲ್ಲ | ಗಂಗಾವತಿ |
| ೨೭. | ಬೇಂಗಂ | ೨೮ | ಹೆಣು | ೫ | ಗುಂಡಮಕ್ಯಾಂಪ |
| ೨೮. | ಸಾಹೇರಾ | ೩೦ | ಹೆಣ್ಣು | ೪ | ಗುಂಡಮಕ್ಯಾಂಪ |
| ೨೯. | ಗೌಸಿಯ | ೨೫ | ಹೆಣ್ಣು | ೨ | ಲಕ್ಷ್ಮಿಕ್ಯಾಂಪ |
| ೩೦. | ನೂರಜಹನ | ೧೫ | ಹೆಣ್ಣು | ೭ | ಲಕ್ಷ್ಮಿಕ್ಯಾಂಪ |
| ೩೧. | ಆಶಾಬನಿ | ೩೦ | ಹೆಣ್ಣು | ೫ | ಇಸ್ಲಾಂಪುರ್ |
| ೩೨. | ಆಪಸರ | ೨೦ | ಹೆಣ್ಣು | ೫ | ಇಸ್ಲಾಂಪುರ್ |
| ೩೩. | ಹಸಿನಾ | ೨೧ | ಹೆಣ್ಣು | ೬ | ಇಸ್ಲಾಂಪುರ್ |
| ೩೪. | ತಾಹೆರಾ | ೨೫ | ಹೆಣ್ಣು | ಇಲ್ಲ | ಇಸ್ಲಾಂಪುರ್ |

## ಗ್ರಂಥಋಣ (Referenes.)


೧. ಪ್ರೊ. ಅಲ್ಲಮಪ್ರಬು ಬೆಟ್ಟದೂರು, ಪಾಟಿಲ್, ೨೦೦೫, ಗುಲ್ಬರ್ಗಾ, ಪ್ರಸಾರಂಗ.

೨. ಅಬ್ದುಲ್ ಗಫೂರ,೧೯೯೬, ಪವಿತ್ರ ಕುರಾನ್, ಮಂಗಳೂರು, ಶಾಂತಿ ಪ್ರಕಾಶನ.

೩. ಅಮರೇಶ ನುಗಡೋಣಿ, ೨೦೦೩, ಹೈದ್ರಾಬಾದ್ ಕರ್ನಾಟಕದ ಹಾಡುಪಾಡುಗಳು, ಕನ್ನಡ ಹಂಪಿ ವಿಶ್ವವಿದ್ಯಾಲಯ ಹಂಪಿ.

೪. ಇಬ್ರಾಹಿಮ್ ಸಈದ್, ೧೯೯೭, ಮುಸುಕಿನಲ್ಲಿ ಮಹಿಳೆ, ಮಂಗಳೂರು, ಶಂತಿ ಪ್ರಕಾಶನ.

೫. ಎಚ್ಚೆಕ್ಕೆಮ, ೨೦೦೧, ಶಿಕ್ಷಣ ಸಂಸ್ಕೃತಿ, ಮೈಸೂರು, ಕಮಲ ಪ್ರಕಾಶನ,.

೬. ಓಶೋ, ೨೦೦೩, ಶಿಕ್ಷಣದಲ್ಲಿ ಕ್ರಾಂತಿ, ಬೆಂಗಳೂರು, ಅನುಭವ ಪ್ರಕಾಶನ.

೭. ಓಬಳೇಶ್ವ ಘಟ್ಟ, ೧೯೯೨, ಭಾರತೀಯ ಶಿಕ್ಷಣ ಮತ್ತು ಪ್ರಚಲಿತ ಸಮಸ್ಯೆ ತೋರನ ಘಟ್ಟ, ಶಿವಗಂಗಾ ಪ್ರಕಾಶನ.

೮. ಕಾರೂರು ಎನ್.ಜಿ., (ಸಂ) ೨೦೦೧, ಶಿಕ್ಷಣ ಮಾರ್ಗ, ರವಿಗ್ರಾಫಿಕ್ಸ್, ರಾಜಜೀನಗರ ಬೆಂಗಳೂರು.

೯. ಕೃಷ್ಣ ಮೂತಿ ಜಿ.ಎಮ್., ೨೦೦೨, ವಿದ್ಯಾರ್ಥಿ ಕೈಪಿಡಿ, ಬೆಂಗಳೂರು, ಸಪ್ನಾ ಬುಕ್ ಹೌಸ್ ಗಾಂಧಿನಗರ.

೧೦. ಡಾ. ಕೃಷ್ಣಕುಮಾರ್ ಸಿ.ಪಿ., ಶಿವರಾಮು ಕಾಡನಕುಪ್ಪ ಪಿ.ರ್. (ಸಂ), ೨೦೦೧, ಸುವರ್ಣ ಶಿಕ್ಷಣ, ಮೈಸೂರು, ರಾಜೇಂದ್ರ ಪ್ರಿಂಟರ್ಸ್, ಮತ್ತುಪಬ್ಲಿಷ್.

೧೧. ಚಂದ್ರಚಾರ ಎಚ್.ಎಮ್, ೨೦೦೨, ಶೈಕ್ಷಣಿಕ ಚಿಂತನೆಗಳು, ಹಾವೇರಿ ಅಶ್ವಿನಿ ಪ್ರಕಾಶನ.

೧೨. ಚಂದ್ರಚಾರ ಹಚ್.ಎಮ್., ೨೦೦೨-೨೦೦೩, ಹಾವೇರಿ, ಅಶ್ವಿನಿ ಪ್ರಕಾಶನ.

೧೩. ಜಯಕುಮಾರ್ ಅನುಗೋಳ್,೨೦೦೩, ಕಡ್ಡಾಯ ಪ್ರಾಥಮಿಕ ಶಿಕ್ಷಣ ಸದಾವಕಾಶಗಳು ಮತ್ತು ಸವಾಲುಗಳು, ನವ ಕರ್ನಾಟಕ ಪಬ್ಲಿಕೇಷನ್ಸ್.

೧೪. ಜಿಲ್ಲಾ ಪಂಚಾಯತಿ ಕೊಪ್ಪಳ, ೨೦೦೪-೨೦೦೫ ನೇ ಸಾಲಿನ ಅಂಕಿಅಂಶಗಳ ಮಾಹಿತಿ.

೧೫. ಡಾ.ಜ್ಯೋತ್ಸ್ನಾ ಕಾಮತ್,೧೯೮೮, ಕರ್ನಾಟಕದ ಶಿಕ್ಷಣ ಪರಂಪರೆ, ಗದಗ ಪ್ರಕಾಶನ : Head kannada Department Bombay.

೧೬. ತುಕರಾಮು, ಎಸ್.ರಾಜು.ಬಿ(ಸಂ), ೨೦೦೦, ಸಾಕ್ಷರ ದಾರಿಯ ಸಾವಿರ ಹೆಜ್ಜೆ, ಮೈಸೂರು, ರಾಜ್ಯ ಸಾಂಪನ್ಮೂಲ ಕೇಂದ್ರ.

೧೭. ತಾರವಾಳ ಡಾ.ಎಂ.ಎಸ್.,೨೦೦೨, ಕರ್ನಾಟಕದಲ್ಲಿ ಪೂರ್ವ ಪ್ರಾಥಮಿಕ ಶಿಕ್ಷಣ, ಬೆಂಗಳೂರು, ಉಲ್ಲಾ ಸಪ್ರಕಾಶ.

೧೮. ನಾಗಪ್ಪ.ಟಿ.ಅರ್., ವಂಕಟಯ್ಯ ಪಿ.ಅರ್.ಎನ್ (ಸಂ), ೧೯೮೬, ಸಂಪೂರ್ಣ ಸಾಕ್ಷರತಾ ಕಾರ್ಯಕ್ರಮ, ಮೈಸೂರು, ಚೇತನ ಬುಕಹೌಸ.

೧೯. ನಾಗರಾಜ ಟಿ.,೨೦೦೪, ಭಾರತದಲ್ಲಿ ಬಹುಸಂಖ್ಯಾತ ಮತ್ತು ಅಲ್ಪಸಂಖ್ಯಾತರ ಅಧ್ಯಯನ,ಮೈಸೂರು, ಲಕ್ಷ್ಮಿ, ಪ್ರಿಂಟಿಂಗ ಮತ್ತು ಪಬ್ಲಿಷಿಂಗ ಹೌಸ್.

೨೦. ನಾರಯಣ ಎಂ, ೨೦೦೪, ಸಮಾಜಿಕ ಸಂಸ್ಥೆಗಳು ಮತ್ತು ಸಮಾಜಿಕ ಬದಲಾವಣೆ,. ಮ್ಯಸೂರ್, ಚೇತನ ಬುಕ್ ಹೌಸ್.

೨೧. ನಾರಯಣ ಎ.ಅರ್.(ಸಂ), ೧೯೯೩, ಶಿಕ್ಷಣ ಮಾಧ್ಯಮ, ಬೆಂಗಳೂರು. ಪ್ರಕಾಶಕರು ಗೀತಾಕುಟೀರ.

೨೨. ನಾಯಕ್ ಜೆ.ಪಿ., ೧೯೮೭, ಶಿಕ್ಷಣ ಆಯೋಗ, ಬೆಂಗಳೂರು, ಐಬಿಎಚ್ ಪ್ರಕಾಶನ.

೨೩. ನಾಯಕ್ ಜೆ.ಪಿ., ೧೯೯೦, ಭಾರತದಲ್ಲಿ ಪ್ರಾಥಮಿಕ ಶಿಕ್ಷಣ ಅನು: ಮಹಾಬಲೇಶ್ವರ ರಾವ್, ಮೈಸೂರು, ಗೀತಾ ಬುಕ್ ಹೌಸ್.

೨೪. ಡಾ. ಪ್ರಶಾಂತ ಡಿ.(ಸಂ),೨೦೦೪ , ಶಾಲಾ ಬಿಸಿಯೂಟ ಅಧ್ಯಯನ ವರದಿ ಗದಗ.

೨೫. ಡಾ.ಪ್ರಶಾಂತ ಹಚ್.ಡಿ (ಸಂ), ೨೦೦೬, ಶಾಲಾಶಿಕ್ಷಣದ ವಿಕೇಂದ್ರಿಕರಣ, ಕನ್ನಡ ವಿಶ್ವಾವಿಧ್ಯಾನಿಲಯ ಹಂಪಿ, ಪ್ರಸಾರಂಗ.

೨೬. ಡಾ. ಪ್ರಶಾಂತ್ ಎಚ್.ಡಿ., ೨೦೦೫, ಈ ಶಾನ್ಯ ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಸಮಾಜ, ಕನ್ನಡ ವಿಶ್ವಾವಿದ್ಯೆಆಲಯ ಹಂಪಿ, ಪ್ರಸಾರಂಗ.

೨೭. ಡಾ. ಪ್ರಶಾಂತ ಎಚ್.ಡಿ.(ಸಂ), ೨೦೦೫ ಅಭಿವೃದ್ಧಿ ಅಧ್ಯಯನ ಕನ್ನಡ ವಿಶ್ವ ವಿದ್ಯಾಲಯ ಹಂಪಿ, ಪ್ರಸಾರಂಗ.

೨೮. ಬರಮಣ್ಣ ಬೂ. ಕಂಪಾಟಿ, ೨೦೦೧, ಗುಣಗಳಗುಟ್ಟು, ಹಾವೇರಿ, ಸೃಜನ ಪ್ರಕಾಶನ,.

೨೯. ಬಾಲಚಂದ್ರ ಜಯಶೆಟ್ಟಿ (ಸಂ), ಪ್ರಾಥಮಿಕ ಶಿಕ್ಷಣ ಮಕ್ಕಳ ಮೂಲಭೂತಹಕ್ಕು, ಗುಲಬರ್ಗಾ, ಶ್ರೀಸಿದ್ಧಲಿಂಗೇಶ್ವರ ಪ್ರಕಾಶನ.

೩೦. ಬೇಥಲ್ ಎಂ.(ಸಂ), ೨೦೦೨, ಹೊಸದೆಹಲಿ, ಅನು: ಸುಲೇಂದ್ರ ನಾಡಿಗ, ಸೃಷ್ಟಿಶೀಲ ಬದುಕಿಗಾಗಿ ಶಿಕ್ಷಣ, ನ್ಯಾಷನಲ್ ಬುಕ್ ಟ್ರಷ್ಟ.

೩೧. ಭೈರಪ್ಪ ಕೆ.,೨೦೦೩, ಪ್ರಸ್ತುತ ಸಾಮಾಜಿಕ ಸಮಸ್ಯೆಗಳು, ಬೆಂಗಳೂರು, ಕೇಂಬ್ರಿಡ್ಸ್ ಪಬ್ಲಷಿಂಗ್ ಕಂಪನಿ ಪ್ರೈ.ಲಿ.,

೩೨. ಮಹಾಬಲೇಶ್ವರ ರಾವ್, (ಸಂ) ೧೯೮೫, ಅಸಮಾನತೆಯ ನಾಡಿನಲ್ಲಿ ಶಿಕ್ಷಣ, ಉಡುಪಿ, ಜನವಾದಿ ಪ್ರಕಾಶನ

೩೩. ಮಂಚಯ್ಯ ಸಾ., (ಸಂ),೨೦೦೧, ಶಿಕ್ಷಣ; ಅಭಿವ್ಯಕ್ತಿ, ಸಂಪಾದಕರು ಬೆಂಗಳೂರು, ಅಳಿಲು ಸೇವ ಸಂಸ್ಥೆ.

೩೪. ಮಹ್ಮದ ಕುಳಾಯಿ, ಶರ್ಫುದ್ಧೀನ ಬಿ.ಎಸ್., ಅಕ್ಬರ್ ಅಲಿ, ೨೦೦೦, ಶಿಕ್ಷಣ ಮತ್ತು ಮುಸ್ಲಿಮರು, ಮಂಗಳೂರು, ಮುಸ್ಲಿಂ ಲೇಖಕರ ಸಂಘ.

೩೫. ಡಾ. ಮಹಾಬಲೇಶ್ವರ ರಾವ್,೧೯೯೯, ಪ್ರಾಥಮಿಕ ಶಿಕ್ಷಣದ ಸಮಸ್ಯೆಗಳು ಮತ್ತು ಸವಾಲುಗಳು, ಬೆಂಗಳೂರು, ನವ ಕರ್ನಾಟಕ ಪಬ್ಲಿಕೇಷನ್.

೩೬. ಮುರುಳಿ ಮೋಹನ್ ಕಾಟೀ(ಸಂ), ೨೦೦೫, ಮಾರಾಟದ ಶಿಕ್ಷಣ , ಬೆಂಗಳೂರು, ಪುಸ್ತಕ ಪ್ರೀತಿ ಪ್ರಕಾಶನ.

೩೭. ರಹೆಮತ ತರಿಕೇರಿ (ಸಂ),೨೦೦ಧರ್ಮ, ( ಸಹ ಸಂ) ಕನ್ನಡ ವಿಶ್ವವಿದ್ಯಾಲಯ ವಿಶ್ವ ಕೋಶ ;೨ ಮಾಧವ ಪೆರಜೆ, ವೆಂಕಟೇಶ, ಬೆಂಗಳೂರು, ಪ್ರಕಾಶಕರು ಪ್ರಕಾಶಕರು, ಕೈಲಾಸ್ ಪ್ರಿಂಟರ್ಸ್.

೩೮. ಡಾ.ರಾಮಕೃಷ್ಣ ಜಿ, ಪೊ. ಥೇಕೆಡಲ್ ಕೆ.ಕೆ.,(ಸಂ) ೧೯೯೮, ಶತಮಾನದ ಅಂಚಿನಲ್ಲಿ ಶಿಕ್ಷಣ, ಬೆಂಗಳೂರು, ನವ ಕರ್ನಾಟಕ ಪ್ರೈವೇಟ್ ಲಿಮಿಟೆಡ್.

೩೯. ರೇಣಕಪ್ಪ ಜಿ.ಎಸ್.,೨೦೦೪, ಶಿಕ್ಷಣದ ಬುನಾದಿ, ತುಮಕೂರು,ಶಿವಾರ್ಚಿತ ಪ್ರಕಾಶನ.

೪೦. ಶಂಕರ್ ರಾವ್ ಚ.ನ., ೧೯೯೭, ಭಾರತೀಯ ಸಮಾಜ ಶಾಸ್ತ್ರ, ಬೆಂಗಳೂರು, ಕೆಂಬ್ರಿಡ್ಜ್ ಪಬ್ಲಿಷಿಂಗ್ ಕಂಪನಿ.

೪೧. ಡಾ.ಶಾಂತಾ ಇಮ್ರಾ ಪೂರಾ, ೨೦೦೧, ಧರ್ಮ ಮಹಿಳೆ ಮತ್ತು ಸಮಾಜ, , ಧಾರವಾಡ್, ಚೇತನ ಪ್ರಕಾನ.

೪೨. ಡಾ. ಶ್ರೀಮತಿ ಎಚ್.ಎಸ್.(ಕನ್ನಡಕ್ಕೆ), ಜೊರಾಲ್ಟಿನ್ ಫೋರ್ಬ್ಸ(ಇಂಗ್ಲೀಷ್ ಮೂಲ) ೨೦೦೧, ಆಧುನಿಕ ಭಾರತದಲ್ಲಿ ಮಹಿಳೆ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪ್ರಸಾರಂಗ.

೪೩. ಸದಾಶಿವಯ್ಯ ಎಸ್.,೨೦೦೧, ಶಿಕ್ಷಕರಾಗುವಿರಾ?, ಉಡುಪಿ, ನವ ಪ್ರಕಾಶನ.

೪೪. ಸಮಗ್ರ ಅಂಕಿ ಅಂಶಗಳ ಮಾಹಿತಿ (೨೦೦೬).

೪೫. ಪ್ರೊ. ಸೂರ್ಯಕಾಂತ್ ಶೀಲಾವಂತರು, ೨೦೦೩,ಸ್ವತಂತ್ರ ಭಾರತದಲ್ಲಿ ಶಿಕ್ಷಣ ಮತ್ತು ಶ್ರೇಷ್ಠ ಶಿಕ್ಷಣ ತಜ್ಞರು ಗುಲಬರ್ಗಾ, ಸಿದ್ದಲಿಂಗೇಶ್ವರ ಪ್ರಕಶನ.

## ಆಂಗ್ಲ ಗ್ರಂಥಗಳು

1. Asgarali Engineer ,1999, The Quran Women and Modern Society Sterling, New Delhi Publication Pvt, Ltd.

2. Jayakumar Anugol, 1995, Indian school of Political Economy, Puna Compulsory Primary Education, Opportunities & Challenges Publishing by I.S.P.E.

3. Shashidhar .H, 2001, Census of India,Bangalore, Publication By Kendiriya Sadana,

## ಪತ್ರಿಕೆಗಳು

೧. ಅನಂತ ಮೂರ್ತಿ ಯು.ಆರ್., ೧೯೮೪, ರುಜುವಾತು, ಮೈಸೂರು, ಸಂಚಿಕೆ-೧೬ ಅಕ್ಟೋಬರ್ ಡಿಸೆಂಬರ್, ಸಂಚಿಕೆ -೧೪ ಎಪ್ರಿಲ ಜೂನ್

೨. ಗಾಯತ್ರಿ ಎನ್.(ಸಂ), ೨೦೦೨ ನವೆಂಬರ್, ಬೆಂಗಳೂರು ರಾಮಕೃಷ್ಣ ಪ್ರಕಾಶಿತರು (ಸಂಪುಟ-೧೬, ಸಂಚಿಕೆ-೧೧).

೬. ಗಾಯತ್ರಿ ಎನ್(ಸಂ), ೨೦೦೫-೨೦೦೬, ಯೋಜನಾ ಬೆಂಗಳೂರು, ರಾಮಕೃಷ್ಣ ಪ್ರಕಾಶಕರು.

೭. ಸುನಿತಾ ವಿಲಿಯಮ್ಸ್, ೨೦೦೭ ಫೆಬ್ರುವರಿ, ವಿಕಸ್ವತಿ, ಬೆಂಗಳೂರು, ರಾಮಕೃಷ್ಣ ಪ್ರಕಾಶಕರು.

೮. ಸಂಘದ ದಿನಚರಿ, ೨೦೦೩, ದಿಟ್ಟ ಹೆಜ್ಜೆಗಳು, ಬೆಂಗಳೂರು.

